ಫಲಜ್ಯೋತಿಷ್ಯ ಜ್ಯೋತಿರ್ಮಾಲಾ :

ನಕ್ಷತ್ರ : ೧೨

# ಚುನಾವಣೆಯ ಜ್ಯೋತಿಷ್ಯ



ಲೇಖಕರು :

ಶ್ರೀ ಎನ್. ಕೆ. ಜೋಗಳೇಕರ
ಧಾರವಾಡ



[ ಬೆಲೆ : ನಾಲ್ಕು ರೂಪಾಯಿಗಳು ]

ಪ್ರಕಾಶಕರು :
ಎನ್. ಕೆ. ಜೋಗಳೇಕರ
ಜ್ಯೋತಿಷ್ಯ ಕಾರ್ಯಾಲಯ
ಜವಳೀ ಪೇಟ,
ಧಾರವಾಡ–೧

K133.5
JOG

೭೨೨7407

ಪ್ರಥಮ ಮುದ್ರಣ : ೧೯೭೧

(ಎಲ್ಲ ಹಕ್ಕುಗಳು ಗ್ರಂಥಕರ್ತರ ಸ್ವಾಧೀನ)

ಬೆಲೆ : ನಾಲ್ಕು ರೂಪಾಯಿಗಳು.

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಗ್ರಂಥ ಭಂಡಾರ
ಕ್ರಮ ಸಂಖ್ಯೆ 08684
ವರ್ಗ
ವರ್ಗ ಸಂಖ್ಯೆ ನಾಗೇಂದ್ರರಾವ್ ರವರ ದಾನ
ಬಂದ ತಾ|| 30-7-02
ಬೆಲೆ 4=00

ಮುದ್ರಕರು:
ಎಮ್. ಎ. ಕಾಮತ್
ಹಿಂದಮಾತಾ ಮುದ್ರಣಾಲಯ
ಗಾಂಧೀ ಚೌಕ
ಧಾರವಾಡ





# ಅರ್ಪಣೆ

ಸಾಹಿತಿ, ನಟ, ಸ್ನೇಹಿತ, ಕಷ್ಟಜೀವಿ, ಸ್ವತಂತ್ರವಿಚಾರಿ,

ಸಮರ್ಥ ಕಲ್ಪಕ, ಸರ್ವರ ಸರ್ವೋನ್ನತಿಯನ್ನು ಬಯಸುವ

ಆತ್ಮೀಯ ಮಿತ್ರರಾದ

**ಪ್ರೊ. ಕೆ. ಎಸ್. ಶರ್ಮಾ**, ಎಂ.ಎ.,ಎಲ್‌ಎಲ್.ಎಮ್.,

ಇವರಿಗೆ ನನ್ನ ಈ ಕೃತಿ

ಅತ್ಯಾನಂದದಿಂದ ಅರ್ಪಿತ.



# ಮೊದಲ ನುಡಿ

ಸ್ವಾತಂತ್ರ್ಯದ ಅನಂತರ, ಭಾರತದಲ್ಲಿ ಚುನಾವಣೆ ಜನ ಸಾಮಾನ್ಯರ ನಿತ್ಯ ಜೀವನದ ಒಂದು ಮುಖ್ಯಾಂಶವಾದಂತಾಗಿದೆ. ರಾಜಕೀಯ ಸ್ಥಿರತೆ, ಅಸ್ಥಿರತೆ, ಏಳು – ಬೀಳು ಹೆಚ್ಚು–ಹೆಚ್ಚು ಅನಿಶ್ಚಿತವಾಗಿರುವಂತೆ ಜನ ಸಾಮಾನ್ಯರು ತಮ್ಮ ಭವಿತವ್ಯದ ಬಗೆಗೆ ನಿರಾಶೆ ಹೊಂದುವ ಮಟ್ಟವನ್ನು ಮುಟ್ಟುತ್ತಿದ್ದರೆ, ರಾಜಕಾರಣಿಗಳು ತಮ್ಮ ಭವಿತವ್ಯದ ಬಗೆಗಂತೂ ಹೆಚ್ಚು ಹೆಚ್ಚು **ಅಭದ್ರತಾ ಭಾವ**(insecurity) ಹೊಂದುತ್ತಿದ್ದಾರೆ. ಹೀಗೆ ಭಾರತದಲ್ಲಿ ನಿತ್ಯ ಜೀವನದ ಏರು-ಪೇರು ರಾಜಕೀಯ ಸ್ಥಿರತೆ, ಅಸ್ಥಿರತೆಯ ಮೇಲೆ ಆಧಾರಪಟ್ಟಿರುವದರಿಂದ ಚುನಾವಣೆಯು ಬಹಳ ಮುಖ್ಯವಾಗಿ-ರುತ್ತದೆ.

ಜ್ಯೋತಿಷ್ಯವು ಜೀವನದ ಭವಿತ್ಯವ್ಯದ ಕನ್ನಡಿಯಾಗಿದ್ದರಿಂದ ಚುನಾ-ವಣೆ ಹಾಗೂ ಜ್ಯೋತಿಷ್ಯಗಳ ಪರಸ್ಪರ ಸಂಭಂಧದ ಅಭ್ಯಾಸ ಬಹಳ ಮಹತ್ವದ್ದಾಗಿ ಪರಿಣಮಿಸುತ್ತದೆ. ಚುನಾವಣೆಗೆ ನಿಲ್ಲುವ (ಸ್ಪರ್ಧಿಸುವ) ಅಭ್ಯರ್ಥಿಯು ಮುಖ್ಯವಾಗಿ ಕೇಳುವ ಪ್ರಶ್ನೆಗಳೆಂದರೆ **"ನಾನು ಚುನಾವಣೆಯಲ್ಲಿ ಆರಿಸಿ ಬರುತ್ತೇನೆಯೋ? ನನಗೆ ಅಧಿಕಾರ ಸ್ಥಾನದ ಪ್ರಾಪ್ತಿಯಾಗುತ್ತದೆಯೆ?"** ಈ ಎರಡೂ ಪ್ರಶ್ನೆಗಳು ಬಹಳ ಸರಳವಾಗಿ ಕಂಡರೂ ಈ ಎರಡೇ ಎರಡು ಪ್ರಶ್ನೆಗಳ ಉತ್ತರಕ್ಕಾಗಿ ಇವುಗಳ ಸಮಗ್ರ ವಿವೇಚನೆಗಾಗಿ ಒಂದು ಗ್ರಂಥವನ್ನೇ ಬರೆಯ ಬೇಕಾಯಿತು. **ಚುನಾವಣಾರೂಢ ಪ್ರಜಾಪ್ರಭುತ್ವದಲ್ಲಿ** "ಚುನಾವಣೆಯ ಜ್ಯೋತಿಷ್ಯ"ದ ವಿಶ್ಲೇಷಣೆ ಇಲ್ಲದಿದ್ದರೆ ಜ್ಯೋತಿಷ್ಯ ಶಾಸ್ತ್ರ ಸಾಹಿತ್ಯಕ್ಕೊಂದು ಕೊರತೆಯಾಗುವದೆಂದು ಭಾವಿಸಿ, ಈ ಗ್ರಂಥವನ್ನು ಬರೆಯುವ ನಿರ್ಧಾರಕ್ಕೆ ಬಂದೆ.

ಚುನಾವಣೆಯು ಜ್ಯೋತಿಷ್ಯದ ಅನೇಕ ಸೂಕ್ಷ್ಮ ಅಂಶಗಳನ್ನು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಅಭ್ಯಾಸ ಮಾಡಿದ ಕಿರು ಹೊತ್ತಿಗೆ ಇದಾಗಿದೆ. ಚುನಾವಣೆಯಲ್ಲಿ ಭಾಗವಹಿಸುವ ಅಭ್ಯರ್ಥಿಗಳಿಗಷ್ಟೇ ಅಲ್ಲ, ಎಲ್ಲ ಶ್ರೀಸಾಮಾನ್ಯರಿಗೂ ಶ್ರದ್ಧೆಯನ್ನುಂಟು ಮಾಡುವ ರೀತಿಯಲ್ಲಿ ಈ ವಿಷಯದ ನಿರೂಪಣೆ ಮಾಡಲಾಗಿದೆ. ಜ್ಯೋತಿಷಿಗಳಿಗಂತೂ ಇದೂ ಅನಿವಾರ್ಯ ಗ್ರಂಥವೆಂದು ನಾನು ಬೇರೆ ಹೇಳ ಬೇಕಿಲ್ಲ. ಇದಕ್ಕೆ ಕಾರಣವಿಷ್ಟೇ; ಕನ್ನಡದಲ್ಲಿ ಜ್ಯೋತಿಷ್ಯ ಶಾಸ್ತ್ರದ ಒಂದು ಹೊಸ ಮಾರ್ಗವನ್ನು ಈ ಗ್ರಂಥದಲ್ಲಿ-ರೂಪಿಸುವ ಬೃಹತ್ ಕಾರ್ಯಕ್ಕೆ ಯತ್ನಿಸಿದ್ದೇನೆ. ಕ್ಲಿಷ್ಟ ಸಮಸ್ಯೆಗಳನ್ನೊಳಗೊಂಡ ಈ ನವ್ಯ ಜಗತ್ತಿನಲ್ಲಿ ಜ್ಯೋತಿಷಿಗಳು ಸಿದ್ಧಾಂತದ ಸಂಪ್ರದಾಯಕ್ಕೆ ಶರಣರಾಗದೆ, ಹಳೆ ಸಿದ್ಧಾಂತಗಳು ತಪ್ಪು ಎಂದುತೋರಿದಾಗ, ಇಲ್ಲವೇ ಹಳೆಯ ಸಿದ್ಧಾಂತಗಳಿಗೆ ಹೊಸ ಅರ್ಥವನ್ನು ಹಚ್ಚುವಾಗ, ಅವುಗಳನ್ನು ದಿಟ್ಟತನದಿಂದ ಎದುರಿಸಿ, ಹೊಸ ಸಿದ್ಧಾಂತಗಳನ್ನು ಹೊಸ ಅರ್ಥಗಳನ್ನು, ಹಾಗೂ ವಿಚಾರಗಳನ್ನು ರೂಪಿಸಬೇಕು. ಅರ್ಥಾತ್, ಹೊಸ ಮಾರ್ಗ ನಿರ್ಮಾಪಕರಾಗಬೇಕು. ಈ ಪಂಥಕ್ಕೆ ಸೇರಿದವನು ನಾನು. ಬಹುಶಃ ಜ್ಯೋತಿಷ್ಯ ಶಾಸ್ತ್ರ ಸಾಹಿತ್ಯದಲ್ಲಿ ''ಚುನಾವಣೆ ಹಾಗೂ ಜ್ಯೋತಿಷ್ಯ''ಗಳ ಸಮಗ್ರ ವೈಜ್ಞಾನಿಕ ವಿಶ್ಲೇಷಣೆ ಮಾಡಿರುವ ಗ್ರಂಥ ಕನ್ನಡ ಭಾಷೆಯಲ್ಲಿ ಇದೊಂದೇ ಇರಬೇಕೆಂದು ಭಾವಿಸುತ್ತೇನೆ. ಆದುದರಿಂದ ಇದೊಂದು ಪ್ರಯೋಗಾತ್ಮಕ ಕೃತಿ ಇದ್ದು, ನನ್ನ ಅನುಭವದ ಸೂತ್ರಗಳನ್ನೇ ಅನುಸರಿಸಿ, ಜ್ಯೋತಿಷ್ಯ ಶಾಸ್ತ್ರದ ಅಭ್ಯಾಸದ ಆಧಾರದ ಮೇಲಿಂದ, ಸಂಶೋಧನಾತ್ಮಕ ದೃಷ್ಟಿಯಿಂದ, ಇದನ್ನು ರಚಿಸಲಾಗಿದೆ. ಈ ಕೃತಿ ವೃತ್ತಿಬಾಂಧವರಿಗೊಂದು ದಾರಿ ದೀಪವಾಗಲೆಂದು ನನ್ನ ಇಚ್ಛೆ. ನನ್ನ ವೃತ್ತಿಬಾಂಧವರು ಹಾಗೂ ಸಹೃದಯದ ವಾಚಕರು ಇದರಲ್ಲಿಯ ಸೂತ್ರಗಳನ್ನು, ನಿಯಮಗಳನ್ನು, ತಮ್ಮ ಅನುಭವಕ್ಕೆ ಪ್ರಯೋಗಿಸಿ, ನನ್ನ ನಿರ್ಣಯಗಳ ಸಫಲತೆಯನ್ನು ಅಳೆಯಬೇಕು. ಈ ಬಗೆಗೆ ವಾಚಕರು ಇದರಲ್ಲಿಯ ಯಾವದಾದರೊಂದು ನ್ಯೂನತೆ ಕಂಡರೆ, ಆ ನ್ಯೂನತೆಯ ವಿವರಣೆಯನ್ನು ಹಾಗೂ ತಮ್ಮ ಸಲಹೆ ಸೂಚನೆಗಳನ್ನು ತಿಳಿಸಿದಲ್ಲಿ ಸ್ವಾಗತಿಸುವೆನು.



## ಮೊದಲ ನುಡಿ

ಸ್ವಾತಂತ್ರ್ಯದ ಅನಂತರ, ಭಾರತದಲ್ಲಿ ಚುನಾವಣೆ ಜನ ಸಾಮಾನ್ಯರ ನಿತ್ಯ ಜೀವನದ ಒಂದು ಮುಖ್ಯಾಂಶವಾದಂತಾಗಿದೆ. ರಾಜಕೀಯ ಸ್ಥಿರತೆ, ಅಸ್ಥಿರತೆ, ಏಳು – ಬೀಳು ಹೆಚ್ಚು–ಹೆಚ್ಚು ಅನಿಶ್ಚಿತವಾಗಿರುವಂತೆ ಜನ ಸಾಮಾನ್ಯರು ತಮ್ಮ ಭವಿತವ್ಯದ ಬಗೆಗೆ ನಿರಾಶೆ ಹೊಂದುವ ಮಟ್ಟವನ್ನು ಮುಟ್ಟುತ್ತಿದ್ದರೆ, ರಾಜಕಾರಣಿಗಳು ತಮ್ಮ ಭವಿತವ್ಯದ ಬಗೆಗಂತೂ ಹೆಚ್ಚು ಹೆಚ್ಚು **ಅಭದ್ರತಾ ಭಾವ**(insecurity) ಹೊಂದುತ್ತಿದ್ದಾರೆ. ಹೀಗೆ ಭಾರತದಲ್ಲಿ ನಿತ್ಯ ಜೀವನದ ಏರು-ಪೇರು ರಾಜಕೀಯ ಸ್ಥಿರತೆ, ಅಸ್ಥಿರತೆಯ ಮೇಲೆ ಆಧಾರಪಟ್ಟಿರುವವರಿಂದ ಚುನಾವಣೆಯು ಬಹಳ ಮುಖ್ಯವಾಗಿ-ರುತ್ತದೆ.

ಜ್ಯೋತಿಷ್ಯವು ಜೀವನದ ಭವಿತ್ಯವ್ಯದ ಕನ್ನಡಿಯಾಗಿದ್ದರಿಂದ ಚುನಾ-ವಣೆ ಹಾಗೂ ಜ್ಯೋತಿಷ್ಯಗಳ ಪರಸ್ಪರ ಸಂಭಂಧದ ಅಭ್ಯಾಸ ಬಹಳ ಮಹತ್ವದ್ದಾಗಿ ಪರಿಣಮಿಸುತ್ತದೆ. ಚುನಾವಣೆಗೆ ನಿಲ್ಲುವ (ಸ್ಪರ್ಧಿಸುವ) ಅಭ್ಯರ್ಥಿಯು ಮುಖ್ಯವಾಗಿ ಕೇಳುವ ಪ್ರಶ್ನೆಗಳೆಂದರೆ **"ನಾನು ಚುನಾವಣೆಯಲ್ಲಿ ಆರಿಸಿ ಬರುತ್ತೇನೆಯೇ? ನನಗೆ ಅಧಿಕಾರ ಸ್ಥಾನದ ಪ್ರಾಪ್ತಿಯಾಗುತ್ತದೆಯೆ?"** ಈ ಎರಡೂ ಪ್ರಶ್ನೆಗಳು ಬಹಳ ಸರಳವಾಗಿ ಕಂಡರೂ ಈ ಎರಡೇ ಎರಡು ಪ್ರಶ್ನೆಗಳ ಉತ್ತರಕ್ಕಾಗಿ ಇವುಗಳ ಸಮಗ್ರ ವಿವೇಚನೆಗಾಗಿ ಒಂದು ಗ್ರಂಥವನ್ನೇ ಬರೆಯ ಬೇಕಾಯಿತು. **ಚುನಾವಣಾ ರೂಢ ಪ್ರಜಾಪ್ರಭುತ್ವದಲ್ಲಿ** "ಚುನಾವಣೆಯ ಜ್ಯೋತಿಷ್ಯ"ದ ವಿಶ್ಲೇಷಣೆ ಇಲ್ಲದಿದ್ದರೆ ಜ್ಯೋತಿಷ್ಯ ಶಾಸ್ತ್ರ ಸಾಹಿತ್ಯಕ್ಕೊಂದು ಕೊರತೆಯಾಗುವದೆಂದು ಭಾವಿಸಿ, ಈ ಗ್ರಂಥವನ್ನು ಬರೆಯುವ ನಿರ್ಧಾರಕ್ಕೆ ಬಂದೆ.

ಚುನಾವಣಯು ಜ್ಯೋತಿಷ್ಯದ ಅನೇಕ ಸೂಕ್ಷ್ಮ ಅಂಶಗಳನ್ನು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಅಭ್ಯಾಸ ಮಾಡಿದ ಕಿರು ಹೊತ್ತಿಗೆ ಇದಾಗಿದೆ. ಚುನಾವಣೆಯಲ್ಲಿ ಭಾಗವಹಿಸುವ ಅಭ್ಯರ್ಥಿಗಳಿಗಷ್ಟೇ ಅಲ್ಲ, ಎಲ್ಲ ಶ್ರೀಸಾಮಾನ್ಯರಿಗೂ ಶ್ರದ್ಧೆಯನ್ನುಂಟು ಮಾಡುವ ರೀತಿಯಲ್ಲಿ ಈ ವಿಷಯದ ನಿರೂಪಣೆ ಮಾಡಲಾಗಿದೆ. ಜ್ಯೋತಿಷಿಗಳಿಗಂತೂ ಇದೂ ಅನಿವಾರ್ಯ ಗ್ರಂಥವೆಂದು ನಾನು ಬೇರೆ ಹೇಳ ಬೇಕಿಲ್ಲ. ಇದಕ್ಕೆ ಕಾರಣವಿಷ್ಟೇ; ಕನ್ನಡದಲ್ಲಿ ಜ್ಯೋತಿಷ್ಯ ಶಾಸ್ತ್ರದ ಒಂದು ಹೊಸ ಮಾರ್ಗವನ್ನು ಈ ಗ್ರಂಥದಲ್ಲಿ–ರೂಪಿಸುವ ಬೃಹತ್ ಕಾರ್ಯಕ್ಕೆ ಯತ್ನಿಸಿದ್ದೇನೆ. ಕ್ಲಿಷ್ಟ ಸಮಸ್ಯೆಗಳನ್ನೊಳಗೊಂಡ ಈ ನವ್ಯ ಜಗತ್ತಿನಲ್ಲಿ ಜ್ಯೋತಿಷಿಗಳು ಸಿದ್ಧಾಂತದ ಸಂಪ್ರದಾಯಕ್ಕೆ ಶರಣರಾಗದೆ, ಹಳೆ ಸಿದ್ಧಾಂತಗಳು ತಪ್ಪು ಎಂದುತೋರಿದಾಗ, ಇಲ್ಲವೇ ಹಳೆಯ ಸಿದ್ಧಾಂತಗಳಿಗೆ ಹೊಸ ಅರ್ಥವನ್ನು ಹಚ್ಚುವಾಗ, ಅವುಗಳನ್ನು ದಿಟ್ಟತನದಿಂದ ಎದುರಿಸಿ, ಹೊಸ ಸಿದ್ಧಾಂತಗಳನ್ನು ಹೊಸ ಅರ್ಥಗಳನ್ನು, ಹಾಗೂ ವಿಚಾರಗಳನ್ನು ರೂಪಿಸಬೇಕು. ಅರ್ಥಾತ್, ಹೊಸ ಮಾರ್ಗ ನಿರ್ಮಾಪಕರಾಗಬೇಕು. ಈ ಪಂಥಕ್ಕೆ ಸೇರಿದವನು ನಾನು. ಬಹುಶಃ ಜ್ಯೋತಿಷ್ಯ ಶಾಸ್ತ್ರ ಸಾಹಿತ್ಯದಲ್ಲಿ ''ಚುನಾವಣೆ ಹಾಗೂ ಜ್ಯೋತಿಷ್ಯ''ಗಳ ಸಮಗ್ರ ವೈಜ್ಞಾನಿಕ ವಿಶ್ಲೇಷಣೆ ಮಾಡಿರುವ ಗ್ರಂಥ ಕನ್ನಡ ಭಾಷೆಯಲ್ಲಿ ಇದೊಂದೇ ಇರಬೇಕೆಂದು ಭಾವಿಸುತ್ತೇನೆ. ಆದುದರಿಂದ ಇದೊಂದು ಪ್ರಯೋಗಾತ್ಮಕ ಕೃತಿ ಇದ್ದು, ನನ್ನ ಅನುಭವದ ಸೂತ್ರಗಳನ್ನೇ ಅನುಸರಿಸಿ, ಜ್ಯೋತಿಷ್ಯ ಶಾಸ್ತ್ರದ ಅಭ್ಯಾಸದ ಆಧಾರದ ಮೇಲಿಂದ, ಸಂಶೋಧನಾತ್ಮಕ ದೃಷ್ಟಿಯಿಂದ, ಇದನ್ನು ರಚಿಸಲಾಗಿದೆ. ಈ ಕೃತಿ ವೃತ್ತಿಬಾಂಧವರಿಗೊಂದು ದಾರಿ ದೀಪವಾಗಲೆಂದು ನನ್ನ ಇಚ್ಛೆ. ನನ್ನ ವೃತ್ತಿಬಾಂಧವರು ಹಾಗೂ ಸಹೃದಯದ ವಾಚಕರು ಇದರಲ್ಲಿಯ ಸೂತ್ರಗಳನ್ನು, ನಿಯಮಗಳನ್ನು, ತಮ್ಮ ಅನುಭವಕ್ಕೆ ಪ್ರಯೋಗಿಸಿ, ನನ್ನ ನಿರ್ಣಯಗಳ ಸಫಲತೆಯನ್ನು ಅಳೆಯಬೇಕು. ಈ ಬಗೆಗೆ ವಾಚಕರು ಇದರಲ್ಲಿಯ ಯಾವದಾದರೊಂದು ನ್ಯೂನತೆ ಕಂಡರೆ, ಆ ನ್ಯೂನತೆಯ ವಿವರಣೆಯನ್ನು ಹಾಗೂ ತಮ್ಮ ಸಲಹೆ ಸೂಚನೆಗಳನ್ನು ತಿಳಿಸಿದಲ್ಲಿ ಸ್ವಾಗತಿಸುವೆನು.

ನಾನು "ಚುನಾವಣೆಯ ಜ್ಯೋತಿಷ್ಯ" ಬರೆಯ ಬೇಕೆಂದು ಉಪಕ್ರಮಿಸಿದಾಗ ಅನೇಕರು ಸಹಾಯ ಮಾಡಿದ್ದಾರೆ. ಅವರ ಸ್ಮರಣೆಯನ್ನು ಆದರದಿಂದ ಮಾಡುತ್ತಿದ್ದೇನೆ. ಹಸ್ತ ಪ್ರತಿಯನ್ನು ತಯಾರಿಸಲು ನೆರವಾದ ನನ್ನ ಮಿತ್ರರಾದ ಶ್ರೀ ಪಿ. ಆರ್. ಮೋಟೆ, ಶಹಾಜಿ ಸಿಂಧೇ, ಇವರಿಗೂ ಕರಡು ಪ್ರತಿಯನ್ನು (Proof) ತಿದ್ದುವದರಲ್ಲಿ ಸಹಕರಿಸಿ ನೆರವಾದ ಶ್ರೀಯುತ ಕೃಷ್ಣ ಪಾಟೀಲ, ಮಹಾವೀರ ಪಾಂಡೆ, ಜಿ. ಚಂದ್ರಶೇಖರ, ಕೆ. ಎ. ಕಾಮತ, ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ. ಈ ನನ್ನ ಗ್ರಂಥವನ್ನು ಅರ್ಪಣೆ ಮಾಡಲು ಅನುಮತಿ ಕೊಟ್ಟ ನನ್ನ ಆತ್ಮೀಯ ಮಿತ್ರರಾದ ಶ್ರೀ ಕುಂಟಲಯ್ಯ ಶ್ಯಾಮ ಶರ್ಮಾ,(ಪ್ರೊ. ಕೆ. ಎಸ್. ಶರ್ಮಾ) ಇವರ ಅಭಿಮಾನ ಚಿರಸ್ಮರಣೀಯವಾಗಿದೆ. ಸಕಾಲಕ್ಕೆ ಚೊಕ್ಕಟವಾಗಿ ಈ ಹೊತ್ತಿಗೆಯನ್ನು ಮುದ್ರಿಸಿ ಕೊಟ್ಟು ಸಹಕರಿಸಿದ ಹಿಂದಮಾತಾ ಮುದ್ರಣಾಲಯದ ಆತ್ಮೀಯ ಮಿತ್ರರಾದ ಶ್ರೀ ಮಧುಕರ ಅ. ಕಾಮತ ಅವರಿಗೂ, ರಕ್ಷಾ ಕವಚವನ್ನು ಮುದ್ರಿಸಿ ಕೊಟ್ಟ ಮನೋಹರ-ರವಿ ಫಾಟೇಕರ ಬಂಧುದ್ವಯರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಇದು ನನ್ನ ಫಲ ಜ್ಯೋತಿಷ್ಯ ಜ್ಯೋತಿರ್ಮಾಲೆಯ ಹನ್ನೆರಡನೆಯ ನಕ್ಷತ್ರ, ಈ "ಚುನಾವಣೆಯ ಜ್ಯೋತಿಷ್ಯವು" ವೃತ್ತಿ ಮಾರ್ಗದರ್ಶನ ಬಯಸುವ ಬಾಂಧವರಿಗೆ ದಾರಿ ದೀಪವಾಗಲೆಂದು ಹಾರೈಸುತ್ತೇನೆ.

ಇಂತೀ ತಮ್ಮವನಾದ

ಧಾರವಾಡ
ತಾ. ೧೫-೩-೧೯೭೦

ಎನ್. ಕೆ. ಜೋಗಳೇಕರ
ಧಾರವಾಡ

# ಪರಿವಿಡಿ

— ಶ್ರೀ —

# ಚುನಾವಣೆಯ ಜ್ಯೋತಿಷ್ಯ

## ವಿಷಯ ಪ್ರವೇಶ

ಸರ್ವರಿಗೂ ಸಮಾನ ಅವಕಾಶವಿರುವಂತಹ ಪ್ರಜಾಪ್ರಭುತ್ವದಲ್ಲಿ, ತೀರ ಸಾಮಾನ್ಯನೆನಿಸುವ ಮನುಷ್ಯನು ಸಹ, ರಾಷ್ಟ್ರದ ಅತ್ಯುಚ್ಚ ಅಧಿಕಾರ ಸ್ಥಾನಕ್ಕೆ ಏರಬಹುದಾಗಿದೆ. ಇಂತಹ ಅವಕಾಶ ದೊರೆಯುವದಕ್ಕೆ ಕಾರಣ ವೇನೆಂದರೆ ನಮ್ಮ ದೇಶದಲ್ಲಿ ಅನುಸರಿಸಲಾಗುತ್ತಿರುವ ಚುನಾವಣೆಯ ಪದ್ಧತಿ.

ಯಾರೊಬ್ಬರು ಒಂದು ಅಧಿಕಾರ ಸ್ಥಾನಕ್ಕೆ ಚುನಾಯಿತರಾಗುವ ದೆಂದರೆ (ಆಯ್ಕೆಯಾಗುವದೆಂದರೆ) ತನ್ನ ಸರಿಸಮಾನರಾದ ಹಲವು ಹುರಿಯಾಳುಗಳೊಂದಿಗೆ ಸ್ಪರ್ಧಿಸಿ ಬಹುಮತ ಪಡೆದು ಗೆಲ್ಲುವದೇ ಆಗಿದೆ. ಅತ್ಯಂತ ಜನಬಲವಿದ್ದ ವ್ಯಕ್ತಿಯೇ ಇಂತಹ ಚುನಾವಣೆ ಗಳಲ್ಲಿ ಆಯ್ಕೆ ಹೊಂದುವನು, ಎಂಬುದು ಸಾಮಾನ್ಯ ತಿಳುವಳಿಕೆ. ಅದರಂತೆಯೇ ಅವನ ಶಿಕ್ಷಣಾರ್ಹತೆ, ಸೇವಾ ಬುದ್ಧಿ, ಮುಂತಾದವು ಅವನಲ್ಲಿರಬೇಕಾದ ಮುಖ್ಯ ಲಕ್ಷಣಗಳೆಂದು ಹೇಳಲಾಗುತ್ತದೆ. ಆದರೆ ಇವೆಲ್ಲಕ್ಕಿಂತ ಹೆಚ್ಚಾಗಿ ಯಾರೊಬ್ಬ ಹುರಿಯಾಳುವಿನಲ್ಲಿಯ ಅಧಿಕಾರ ಬಲ, ಧನ ಬಲ, ಜಾತಿ ಬಲ ಹಾಗೂ ಇತರ ಬಗೆಯ ಸಾಮಾಜಿಕ ವರ್ಚಸ್ಸುಗಳೇ, ಅವನ ಚುನಾವಣಾ ವಿಜಯಕ್ಕೆ ಮುಖ್ಯ ಕಾರಣಗಳಾಗು ವವೆಂದು ಎಲ್ಲರು ಬಲ್ಲರು. ಆದರೆ ಚುನಾವಣೆಗಳಲ್ಲಿಯ ಸೋಲು ಗೆಲುವು ಗಳನ್ನು ಇಷ್ಟೊಂದು ಲಘುವಾಗಿ ವಿಶ್ಲೇಷಿಸಲು ಸಾಧ್ಯವಿಲ್ಲ. ಮೇಲೆ ಹೇಳಿದ ಲಕ್ಷಣಗಳೆಲ್ಲವೂ ಇದ್ದು ಒಬ್ಬ ಹುರಿಯಾಳು ಚುನಾವಣೆಯಲ್ಲಿ ಸೋಲುವ ಸಂಭವವಿದ್ದೇ ಇದೆ ಎಂಬುವದನ್ನು ಅಲ್ಲಗಳೆಯಲಿಕ್ಕೆ ಬರುವ ದಿಲ್ಲ. ಅದು ಏಕೆ ? ಮನುಷ್ಯ ಎಷ್ಟೇ ಪ್ರಯತ್ನಶೀಲನಿದ್ದರೂ ಅವನ ಈ ಪ್ರಯತ್ನದ ಪರಿಣಾಮವನ್ನು ನಿರ್ಧರಿಸುವದು ಯಾವದೇ ಒಂದು ಕಾಣದ

ಕೈ ಎಂಬುದು ತನ್ನತಾನೆ ನಿದರ್ಶನಕ್ಕೆ ಬರುವದು. ಅದನ್ನೇ "ದೈವ" ಎಂದು ಕರೆಯಲಾಗುತ್ತದೆ.

ದೈವದೆದುರು ಮಾನವ ಮಾತ್ರನ ಆಟಸಾಗದೆಂಬುವದು ನಿಜವಾದರೂ ಅದರ ಗತಿಯನ್ನು, ಒಲವನ್ನು ಸಾಕಷ್ಟು ನಿಶ್ಚಿತತೆಯಿಂದ ಅರಿತುಕೊಳ್ಳಲು ಜ್ಯೋತಿಷ್ಯ ಶಾಸ್ತ್ರದ ಮೂಲಕ ಸಾಧ್ಯವಾಗಬಹುದಾಗಿದೆ. ಯಾಂಕೆದರೆ ದೈವ ಪ್ರತಿಯೊಬ್ಬನ ವಿಷಯದಲ್ಲಿ ತಾನು ಹೇಗೆ ನಡೆಯುತ್ತದೆ ಎಂಬದನ್ನು ಗ್ರಹಗತಿಯ ಮೂಲಕ ಸ್ಥೂಲವಾಗಿ, ಸೂಚ್ಯವಾಗಿ, ತಿಳಿಸುತ್ತಲೇ ಇರುತ್ತದೆ. ಅಂತೆಯೇ ವ್ಯಕ್ತಿಯ ಭವಿಷ್ಯವನ್ನು ಅವನ ಜಾತಕದಲ್ಲಿರುವ ಗ್ರಹಗಳ ಬಲಾಬಲದ ಲೆಕ್ಕಾಚಾರದಿಂದ ಬಹುಮಟ್ಟಿಗೆ ಹೇಳಲು ಸಾಧ್ಯವಾಗುವದು. ಇದೇ ಕಾರಣಕ್ಕಾಗಿ ರಾಜಕೀಯದಲ್ಲಿರುವ ವ್ಯಕ್ತಿಗಳಿಗೆ ಜ್ಯೋತಿಷ್ಯ ಶಾಸ್ತ್ರ ಅಮೂಲ್ಯ ಮಾರ್ಗದರ್ಶನ ಮಾಡಬಲ್ಲದು. ಈ ದೃಷ್ಟಿಯಿಂದ ಪ್ರಜಾಪ್ರಭುತ್ವದಲ್ಲಿ ಜೋತಿಷ್ಯಶಾಸ್ತ್ರದ ಆಧಾರದ ಮೇಲೆ ಚುನಾವಣೆಗಳ ವಿಶ್ಲೇಷಣ ಮಾಡುವದು ಅತ್ಯವಶ್ಯಕವೆಂದು ತಿಳಿದು ಈ ಕಿರು ಹೊತ್ತಿಗೆಯನ್ನು ಬರೆಯಲು ಕೈಗೊಂಡಿದ್ದೇನೆ. ಈ ಗ್ರಂಥದಲ್ಲಿ ಐದು ಪ್ರಕರಣಗಳಿವೆ. ಚುನಾವಣೆಯಲ್ಲಿ ಯಾವ ಯಾವ ಅಂಶಗಳು ಮಹತ್ವದ ಪಾತ್ರ ವಹಿಸುತ್ತವೆ ಎಂದು ವಿವೇಚಿಸಿದ "ಚುನಾವಣಾ ಸಪ್ತಕ" ಎಂಬ ಮೊದಲನೇ ಪ್ರಕರಣವು ಬೇರೆ ಬೇರೆ ವಿಧಧ ಚುನಾವಣೆಯ ಕುರಿತು ವಿವೇಚಿಸಿದ "ಚುನಾವಣಾ ಪ್ರಕಾರ" ಎಂಬ ಎರಡನೆಯ ಪ್ರಕರಣವು, ಚುನಾವಣೆಯ ನಂತರ ಉದ್ಭವವಾಗುವ ಕೆಲ ಸಂಗತಿಗಳು ಹಾಗೂ ಚುನಾವಣಾಕಾಲದಲ್ಲಿ ಸಂಭವಿಸುವ ಕೆಲ ಮುಖ್ಯಾಂಶಗಳನ್ನು ಒಳಗೊಂಡ "ಚುನಾವಣೆಯ ಇತರ ಅಂಶ" ಎಂಬ ಹೆಸರಿನಿಂದ ಮೂರನೇ ಪ್ರಕರಣವು ಪರಿಶೀಲಿಸಲಾಗಿದೆ. ನಾಲ್ಕನೇ ಪ್ರಕರಣದಲ್ಲಿ ಚುನಾವಣೆಯ ಅನುಕೂಲ ಕಾಲವನ್ನು ವಿವರಿಸಲಾಗಿದೆ, ಕೊನೆಯ ಪ್ರಕರಣದಲ್ಲಿ ಜ್ಯೋತಿಷಿಗಳ ಮಾರ್ಗದರ್ಶನಕ್ಕಾಗಿ ಅನುಭವಿಕ ನಿಯಮಗಳ ಪ್ರಕರಣವೊಂದನ್ನು ಬರೆಯಲಾಗಿದೆ. ಹೀಗೆಯೇ ಚುನಾವಣೆಯ ಬಗ್ಗೆ ಪಂಚ ಪ್ರಕರಣಗಳ ಮೂಲಕ ಚುನಾವಣೆಯ ಜ್ಯೋತಿಷ್ಯ ಎಂಬ ಗ್ರಂಥದಲ್ಲಿ ಚುನಾವಣಾ ಹಾಗೂ ಜ್ಯೋತಿಷ್ಯದ ಬಗ್ಗೆ ಸಾಮಾನ್ಯ ದೃಷ್ಟಿಯನ್ನು ವ್ಯಕ್ತಪಡಿಸಲು ಪ್ರಯತ್ನಿಸಲಾಗಿದೆ.

# ೧

# ಚುನಾವಣಾ ಸಪ್ತಕ

ಚುನಾವಣೆ ಕೆಲವರಿಗೆ ವೃತ್ತಿ, ಕೆಲವರಿಗೆ ಪ್ರವೃತ್ತಿ, ಕೆಲವರಿಗೆ ಆಟ, ಕೆಲವರಿಗೆ ಅನಿವಾರ್ಯ. ಅಧಿಕಾರಿ ರಾಜಕೀಯದ ತಳಹದಿಯು ಪ್ರಜಾಪ್ರಭುತ್ವದಲ್ಲಿ ಚುನಾವಣೆಯು ಜನಸಾಮಾನ್ಯರ ಜೀವನದ ಉಸಿರಾದರೆ ಅಧಿಕಾರಿ ರಾಜಕೀಯದಲ್ಲಿ ಪಾಲ್ಗೊಳ್ಳುವ ರಾಜಕಾರಣಿಗಳಿಗೆ ಇದೇ "ಪ್ರಾಣವಾಗಿ ಪರಿಣಮಿಸುತ್ತದೆ". ಚುನಾವಣೆಯಲ್ಲಿ ಗೆಲ್ಲದೆ ಅಧಿಕಾರವಿಲ್ಲ ಅಧಿಕಾರವಿಲ್ಲದೇ ಅಧಿಕಾರೀ ರಾಜಕೀಯವಿಲ್ಲ. ಹೀಗೆಯೇ ಚುನಾವಣೆ–ಅಧಿಕಾರ, ಪ್ರಜಾಪ್ರಭುತ್ವದ ರೀತಿಯ ಅನಿವಾರ್ಯ ಅಂಗಗಳಿರುವಾಗ ಚುನಾವಣೆಯ ವೈಜ್ಞಾನಿಕ ವಿಶ್ಲೇಷಣೆಯನ್ನು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ್ಯ ಮಾಡುವ ಅವಶ್ಯಕತೆಯು ಹಿಂದಿನಗಿಂತ ಈಗ ಹೆಚ್ಚಾಗಿದೆ. ಈ ಆವಶ. ಕತೆಯನ್ನು ಮನಗಂಡಾಗ ಪ್ರಪ್ರಥಮವಾಗಿ ಗಮನಿಸಬೇಕಾದ ಅಂಶವೆಂದರೆ ಚುನಾವಣೆಯಲ್ಲಿ ಯಾವ ಯಾವ ಅಂಶಗಳು ಮುಖ್ಯ ಪ್ರಭಾವ ಬೀರುತ್ತವೆ ಈ ಅಂಶಗಳನ್ನು ಜ್ಯೋತಿಷ್ಯ ಶಾಸ್ತ್ರದ ಪರಿಶೀಲನೆಗೆ ಒಳಪಡಿಸಿದಾಗ ಪ್ರತಿಪಾದಿಸುವ ಪರಿಣಾಮವೇ ಈ ಪ್ರಕರಣದ ಪ್ರಸ್ತಾವನ ವಸ್ತು. ಇದನ್ನು "ಚುನಾವಣಾ ಸಪ್ತಕ"ವೆಂದು ಕರೆಯಲಾಗಿದೆ.

**ಚುನಾವಣಾ ಸಪ್ತಕ :**

ಚುನಾವಣೆಯಲ್ಲಿ ಸೋಲು-ಗೆಲವು, ಜಯ-ಅಪಜಯಗಳ ವಿಶ್ಲೇಷಣೆ ಮಾಡಬೇಕಾದಾಗ ನಾವು ಏಳು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ೧) ಅಭ್ಯರ್ಥಿಗಳ (ಹುರಿಯಾಳು) ವ್ಯಕ್ತಿತ್ವ ೨) ಪಕ್ಷ–ಸಂಸ್ಥೆಗಳ ಪ್ರಭಾವ ೩) ಪಕ್ಷ–ಸಂಸ್ಥೆಗಳ ಧುರೀಣರ ಪ್ರಭಾವ ೪) ಜಾತಿ–ವರ್ಗಗಳ ಪ್ರಭಾವ ೫) ಪ್ರಚಾರದ ಪ್ರಭಾವ ೬) ಅಭ್ಯರ್ಥಿಗಳ ಆರ್ಥಿಕ ಬಲ ೭) ಹಿಂದಿನ ಸಾಧನೆ ಹಾಗೂ ಸ್ಥಳೀಯ ರಾಷ್ಟ್ರೀಯ ಸಮಸ್ಯೆಗಳ ಪರಿಣಾಮ.

ಈ ಸಪ್ತಕಗಳನ್ನು ಅಭ್ಯರ್ಥಿಯ ಹಾಗೂ ಅಭ್ಯರ್ಥಿಗಳ ಜಾತಕದ ಆಧಾರದ ಮೇಲೆ ತುಲನಾತ್ಮಕವಾಗಿ ಒಂದೊಂದಾಗಿ ವಿಶ್ಲೇಷಿಸೋಣ.

**೧. ಅಭ್ಯರ್ಥಿಗಳ ವ್ಯಕ್ತಿತ್ವ :**

ವ್ಯಕ್ತಿತ್ವವೆಂದಾಗ ಸಾಮಾನ್ಯ ಪಾರಿಭಾಷೆಯಲ್ಲಿ ವ್ಯಕ್ತಿಯ ದೈಹಿಕ ಅಂಶಗಳ ಚಿತ್ರ ನಮ್ಮ ಕಣ್ಣು ಮುಂದೆ ಮೂಡುತ್ತದೆ. ಆ ವ್ಯಕ್ತಿ ಕುಳ್ಳಾಗಿದ್ದಾನೆ, ಎತ್ತರವಾಗಿದ್ದಾನೆ, ದಪ್ಪವಾಗಿದ್ದಾನೆ, ಒಣಗಿಕೊಂಡಿದ್ದಾನೆ ಮೊದಲಾದ ಅಂಶಗಳ ಸ್ಫುಟವಾಗುತ್ತವೆ. ಆದರೆ 'ವ್ಯಕ್ತಿತ್ವ' ಕೇವಲ ದೈಹಿಕ ರಚನೆ ಅಲ್ಲ. ಅದು ವ್ಯಕ್ತಿಯ ನಾನಾ ಮುಖಗಳ ಸಮ್ಮಿಲನವಾಗಿದೆ. ದೈಹಿಕ ರಚನೆ ಈ ನಾನಾ ಮುಖಗಳ ಒಂದು ಅಂಶ ಮಾತ್ರವಾಗಿದೆ. ವ್ಯಕ್ತಿಯ ಗುಣಧರ್ಮ ವ್ಯಕ್ತಿತ್ವದ ಅವಿಭಾಜ್ಯ ಅಂಶ. ನಾಯಕತ್ವದ ಗುಣಗಳನ್ನು ಹೊಂದಿರುವ ವ್ಯಕ್ತಿ, ನಾಯಕನಾಗುವಂತೆ ಅನುಯಾಯಿ ಗುಣಗಳುಳ್ಳವನು ಅನುಯಾಯಿ ಆಗುತ್ತಾನೆ. 'ನಾಯಕತ್ವ' ಎಂದಾಗ ಬುದ್ಧಿಮತ್ತೆ, ಮಾತುಗಾರಿಕೆ, ದೂರದೃಷ್ಟಿ, ಸೇವಾಮನೋವೃತ್ತಿ, ತ್ಯಾಗ ಪ್ರವೃತ್ತಿ, ಸಾಮಾಜಿಕ ರಾಜಕೀಯ ಪ್ರಜ್ಞೆ, ದೀನ ಬಂಧುತ್ವ, ವಿಚಾರ ಪ್ರತಿಪಾದನಾ ಪಟುತ್ವ, ಸಮಯೋಚಿತ ಚತುರತೆ, ಸಂಘಟನಾ ಶಕ್ತಿ, ಮುಂತಾದ ಗುಣಗಳು ನಾಯಕನಲ್ಲಿ ಇರಬೇಕಾಗುತ್ತದೆ. ಅನುಯಾಯಿಗೆ ಎಲ್ಲಕ್ಕಿಂತ ಮುಖ್ಯವಾಗಿ ಪ್ರಾಮಾಣಿಕ ಅನುಸರಣೆ (ವ್ಯಕ್ತಿ ನಿಷ್ಠೆ) ನಾಯಕನಲ್ಲಿ ನಂಬಿಕೆ ಬೇಕಾಗುತ್ತದೆ.

**ಸಪ್ತವಿಧದ ನಾಯಕರು :**

ನಾಯಕರಲ್ಲಿಯೂ ಕೂಡಾ ಅನೇಕ ಪ್ರಕಾರಗಳಿವೆ. ನಾವು ಪ್ರಾಮುಖ್ಯವಾಗಿ ಏಳು ರೀತಿಯಾಗಿ ವಿಂಗಡಿಸಿದ್ದೇವೆ.

೧) ಆಜನ್ಮನಾಯಕರು :— ಇವರು ಜನ್ಮತಃ ನಾಯಕತ್ವ ಪ್ರಭಾವ ಗುಣಗಳನ್ನು ಹೊತ್ತು ಬಂದಿರುತ್ತಾರೆ.

೨) ಮನೆತನದಿಂದ ನಾಯಕರು :— ಅಂದರೆ ಕೆಲವರು ಮನೆತನದ ಸೊತ್ತಾಗಿ ನಾಯಕತ್ವವನ್ನು ಪಡೆದಿರುತ್ತಾರೆ.

೩) ಪರಿಸರ ಪ್ರಭಾವಿತ ನಾಯಕರು:— ಈ ವರ್ಗದವರು ಪರಿಸರ ಪ್ರಭಾವದಿಂದ ಹುಟ್ಟಿಕೊಳ್ಳುತ್ತಾರೆ.

೪) ಅವಶ್ಯಕತೆಯಿಂದ ನಾಯಕರು:— ಈ ವರ್ಗದವರು ಅವಶ್ಯಕತೆಯ ಒತ್ತಡದಿಂದ ನಾಯಕತ್ವದ ಹೊಣೆಗಾರಿಕೆಯನ್ನು ಹೊರಬೇಕಾಗುತ್ತದೆ.

೫) ಸ್ವಯಂ ರೂಪಿತ ನಾಯಕರು :— ಕೆಲವರು ತಮ್ಮ ಸ್ವಯಂ ಪ್ರತಿಭೆಯಿಂದ ನಾಯಕತ್ವದ ಸ್ಥಾನವನ್ನು ಪಡೆಯುತ್ತಾರೆ.

೬) ಘಟನಾತ್ಮಕ ನಾಯಕರು :— ಈ ವರ್ಗದವರು ಕೆಲ ಘಟನೆಗಳ ಪರಿಣಾಮದಿಂದ ನಾಯಕತ್ವವನ್ನು ಪಡೆಯುತ್ತಾರೆ.

೭) ಸಂಧಾನದಿಂದ ನಾಯಕರು :— ಕೆಲವರು ಸಂಧಾನದಿಂದ ನಾಯಕರಾಗುತ್ತಾರೆ.

ಇದು ಅಲ್ಲದೇ ಪಕ್ಷಾಂತರದ ಪಿಡುಗಿನಿಂದ ಆದ ನಾಯಕರು ಮೊದಲಾದ ಅನೇಕ ರೀತಿಯಿಂದ ನಾಯಕತ್ವ ಪಡೆಯಲು ಸಾಧ್ಯ. ಈ ಬೇರೆ ಬೇರೆ ರೀತಿಯ ನಾಯಕತ್ವ ಪಡೆಯುವದು ಕೂಡಾ ಅವರವರ ಜಾತಕದ ಬಲದಿಂದ ಮಾತ್ರ ಸಾಧ್ಯ. ನಾಯಕತ್ವದ ವಿಷಯವಾಗಿ ಪ್ರತ್ಯೇಕ ಸ್ವತಂತ್ರವಾದ ಪುಸ್ತಕ ಬರೆಯುವಷ್ಟು ವಿವೇಚಿಸಬೇಕಾಗುತ್ತದೆ. ಪ್ರಸ್ತುತ ಗ್ರಂಥದಲ್ಲಿ ಈ ಪ್ರಕರಣದ ಮಟ್ಟಿಗೆ ಮಾತ್ರ ಇಲ್ಲಿ ವಿವೇಚಿಸಲಾಗಿದೆ. ಹೀಗೆಯೇ "ವ್ಯಕ್ತಿತ್ವ" ಎಂದಾಗ ಈ ಎಲ್ಲ ಅಂಶಗಳನ್ನು ಸಮಗ್ರವಾಗಿ ವಿವೇಚಿಸಬೇಕಾಗುತ್ತದೆ. ಇದು ಸಾಮಾಜಿಕ ಮನಃಶಾಸ್ತ್ರದ ಅಳತೆಗೋಲಾದರೆ ಜೋತಿಷ್ಯ ಶಾಸ್ತ್ರದಲ್ಲಿ ವ್ಯಕ್ತಿತ್ವದ ನಿರೂಪಣೆಯ ರೀತಿಯೇ ಬೇರೆ. ಯಾವ ವ್ಯಕ್ತಿಯ ಜಾತಕದಲ್ಲಿ ಯಾವ ಗ್ರಹ ಯಾವ ಸ್ಥಾನದಲ್ಲಿದ್ದು ಒಟ್ಟಾರೆ ಯಾವ ಪರಿಣಾಮ ಕೊಡುತ್ತದೆ ಎಂದು ನಿರ್ಧರಿಸಿ ಯಾವ ಜಾತಕ ನಾಯಕನಾಗುತ್ತಾನೆ, ಯಾವ ಜಾತಕ ಅನುಯಾಯಿ ಎಂಬುದನ್ನು ನಿರ್ಧರಿಸಲು ಬರುತ್ತದೆ.

ಬೀಜಕ್ಕೆ ಬಿಟ್ಟಕಾಯಿ ಹೀಚಿನಲ್ಲಿ ನೋಡು ಎಂಬ ಹಾಗೆಯೆ ಯಾರೊಬ್ಬರ ವ್ಯಕ್ತಿತ್ವದ ವಿಷಯವಾಗಲಿ ನಾಯಕ, ಅನುಯಾಯಿಯ ವಿಷಯವಾಗಲಿ ಜಾತಕದ ಜನ್ಮಲಗ್ನ ಅರ್ಥಾತ್ ತನುಸ್ಥಾನ, ಲಗ್ನೇಶ ಚಂದ್ರ ಇವುಗಳ ಬಲಾಬಲದಿಂದ ಅವರ ವ್ಯಕ್ತಿತ್ವದ ಪ್ರತಿಬಿಂಬ ಕಂಡ್ಕೊಳ್ಳಲು ಬರುತ್ತದೆ. ಇವುಗಳ ವಿವರಣೆ ಈ ಕೆಳಗಿನಂತೆ ಕೊಡಲಾಗಿದೆ:-

೧) ಜಾತಕದಲ್ಲಿ ರವಿಯು ಬಲಾಢ್ಯನಿದ್ದರೆ ಯಾವದೇ ಪರಿಸರದಲ್ಲಿಯೂ ಅವನು ಹುಟ್ಟು ನಾಯಕನಿರುತ್ತಾನೆ. ( ಜನ್ಮತಃ ನಾಯಕನು)

೨) ರವಿ-ಮಂಗಳರು ಬಲಾಢ್ಯರಿದ್ದರೆ ಸಂಘಟನಾ ಸಾಮರ್ಥ್ಯವಿರುತ್ತದೆ.

೩) ಬುಧ-ಗುರು-ಚಂದ್ರ ಬಲಾಢ್ಯವಿದ್ದ ಜಾತಕನು, ಬುದ್ಧಿಮತ್ತೆ, ಮಾತುಗಾರಿಕೆ, ಸಮಯೋಚಿತ ಚತುರತೆ, ವಿಚಾರ ಪ್ರತಿಪಾದನಾ,ಪಟುತ್ವದ ಗುಣಧರ್ಮದಿಂದ ನಾಯಕತ್ವ ಪಡೆಯುತ್ತಾನೆ.

೪) ಶುಕ್ರ-ಶನಿ-ಚಂದ್ರ ಬಲಾಢ್ಯರಿದ್ದ ಜಾತಕನು ತ್ಯಾಗ ಪ್ರವೃತ್ತಿ ಹಾಗೂ ಸೇವಾ ಮನೋವೃತ್ತಿಯ ಗುಣಧರ್ಮದಿಂದ ನಾಯಕತ್ವ ಪಡೆಯುತ್ತಾನೆ.

೫) ಗುರು-ಮಂಗಳರು ಬಲಾಢ್ಯರಿದ್ದ ಜಾತಕನು ದೂರದೃಷ್ಟಿ, ಸಂಘಟನಾ ಶಕ್ತಿ ಈ ಮೊದಲಾದ ಗುಣಧರ್ಮದಿಂದ ನಾಯಕತ್ವ ಪಡೆಯುತ್ತಾನೆ.

೬) ರವಿ-ಬುಧ-ಗುರು-ಚಂದ್ರ ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಜಾತಕ ಸಾಮಾಜಿಕ, ರಾಜಕೀಯ ಪ್ರಜ್ಞೆಯಿಂದಲೂ, ದೀನ ಬಂಧುತ್ವ ವಿಚಾರ ಪ್ರತಿಪಾದನಾ ಪಟುತ್ವದಿಂದಲೂ ನಾಯಕತ್ವ ಪಡೆಯುತ್ತಾನೆ.

೭) ಚಂದ್ರ-ಬುಧರು ಬಲಾಢ್ಯರಿದ್ದವರು ಅಸ್ಖಲಿತ ಮಾತುಗಾರಿಕೆ, ನುರಿತ ಲೇಖನ, ಪ್ರಭಾವಿತ ಬರವಣಿಗೆಯ ಮೂಲಕ ನಾಯಕತ್ವ ಪಡೆಯುತ್ತಾರೆ.

೮) ವೃಷಭ- ಮಿಥುನ- ಕರ್ಕ- ಸಿಂಹ- ವೃಶ್ಚಿಕ- ಧನು- ಮೀನ ಈ ಲಗ್ನದವರು ದೂರ ದೃಷ್ಟಿ, ಸಂಘಟನಾ ಶಕ್ತಿ, ರಾಜಕೀಯ-ಸಾಮಾಜಿಕ ಪ್ರಜ್ಞೆಯಿಂದ ನಾಯಕತ್ವ ಪಡೆಯುತ್ತಾರೆ.

೯) ವೃಷಭ-ಕರ್ಕ-ಸಿಂಹ-ತುಲಾ-ಧನು- ಕುಂಭ ಈ ರಾಶಿಯ ಜನರು ತ್ಯಾಗ, ಪ್ರವೃತ್ತಿ, ಸೇವಾ ಮನೋವೃತ್ತಿ ಮೊದಲಾದ ಗುಣಧರ್ಮದಿಂದ ನಾಯಕತ್ವವನ್ನು ಪಡೆಯುತ್ತಾರೆ.

೧೦) ಮಿಥುನ-ತುಲಾ-ಕುಂಭ-ಕರ್ಕ-ಮೀನ ಈ ರಾಶಿಯ ಜನರು ಬುದ್ಧಿಮತ್ತೆ, ಮಾತುಗಾರಿಕೆ, ಸಂಯೋಜಿತ ಚತುರತೆ, ಸಾಮಾಜಿಕ, ರಾಜಕೀಯ ಪ್ರಜ್ಞೆ ಈ ಮೊದಲಾದ ಗುಣಧರ್ಮದಿಂದ ನಾಯಕತ ಪಡೆಯುತ್ತಾರೆ.

೧೧) ವೃಷಭ- ಕರ್ಕ- ಕನ್ಯಾ- ಮೀನ- ಈ ರಾಶಿಯವರು ಸೇವಾ ಮನೋವೃತ್ತಿಯಿಂದಲೂ, ತ್ಯಾಗ ಪ್ರವೃತ್ತಿಯಿಂದಲೂ, ದೀನಬಂಧುತ್ವ ಮೊದಲಾದ ಗುಣಧರ್ಮದಿಂದ ನಾಯಕತ್ವ ಪಡೆಯುತ್ತಾರೆ.

೧೨) ಮಿಥುನ- ಸಿಂಹ- ವೃಶ್ಚಿಕ- ಮಕರ- ಕುಂಭ ಈ ಐದು ರಾಶಿಯ ಜನರು ಧೂರ್ತರೂ ಚಾಣಾಕ್ಷರೂ ಇದ್ದು, ತಮ್ಮ, ಸ್ವಂತ ಪ್ರತಿಭೆಯಿಂದ, ಸಂಘಟನಾ ಶಕ್ತಿಯಿಂದ ಅಸಂಖ್ಯ ಅನುಯಾಯಿಗಳನ್ನು ಹೊಂದುವವರಲ್ಲದೇ ರಾಜಕೀಯ ಹಾಗೂ ರಾಜಕಾರಣದಲ್ಲಿ ಪಳಗಿದವರಿರುತ್ತಾರೆ.

೧೩) ಲಗ್ನ, ಲಗ್ನೇಶ, ರವಿ-ಚಂದ್ರ ಈ ನಾಲ್ಕು ಸಂಗತಿಗಳು ಪೋಷಕರಿರದೇ ಯಾರು ಯಾವದೇ ಪ್ರಕಾರದ ನಾಯಕನಾಗಲಾರರು.

೧೪) ಮೇಷ-ವೃಷಭ-ಮಿಥುನ-ಕರ್ಕ-ಸಿಂಹ-ವೃಶ್ಚಿಕ-ಧನು-ಮೀನ ಈ ಲಗ್ನದವರು ಜನ್ಮತಃ ನಾಯಕತ್ವದ ಗುಣಧರ್ಮವನ್ನು ಹೊಂದಿದವರು ಇರುತ್ತಾರೆ.

೧೫) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿದ್ದರೆ, ಇಂತಹ ಜಾತಕನು, ಹುಟ್ಟು ಧುರೀಣನಿರುತ್ತಾನೆ.

೧೬) ಜಾತಕದಲ್ಲಿ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿದ್ದರೆ ಅಂಥ ಜಾತಕನು ಅನುಯಾಯಿ ಇರುವದೇ ಹೆಚ್ಚು ಅಥವಾ ಸಂಧಾನದಿಂದ ನಾಯಕರಾಗಲೀ, ಪರಿಸರದ ಪ್ರಭಾವಿತದಿಂದ ನಾಯಕತ್ವವನ್ನು ಕೆಲ ಅವಧಿಯವರೆಗೆ ಪಡೆಯುತ್ತಾರೆ.

೧೭) ವೃಷಭ-ಕರ್ಕ-ಕನ್ಯಾ-ತುಲಾ-ಕುಂಭ-ಮಕರ ಈ ಲಗ್ನದವರು ಹೆಚ್ಚಾಗಿ ಅನುಯಾಯಿಗಳಿರುತ್ತಾರೆ. ಅಥವಾ ಸಂಧಾನದಿಂದ ಇಲ್ಲವೇ ಪರಿಸರದ ಪ್ರಭಾವದಿಂದ ನಾಯಕತ್ವ ಪಡೆಯುತ್ತಾರೆ.

೧೮) ವೃಷಭ-ಕರ್ಕ-ಕನ್ಯಾ-ಮೀನ-ಈ ನಾಲ್ಕು ರಾಶಿಯ ಜನರು ಅನುಯಾಯಿ ಇರುವದೇ ಹೆಚ್ಚು. ಯಾರೊಬ್ಬನನ್ನು ಒಮ್ಮೆ ಧುರೀಣರನ್ನಾಗಿ ಮಾಡಿಕೊಂಡರೆ, ಕೊನೆವರೆಗೂ ಅವರನ್ನು ಹಿಂಬಾಲಿಸುತ್ತಾರೆ.

೧೯) ಶುಕ್ರ - ಚಂದ್ರ - ಬುಧರು ಜಾತಕದಲ್ಲಿ ಬಲಾಢ್ಯರಿದ್ದು, ಗೋಚರಿಯಿಂದ ಗ್ರಹಗಳು ಅನುಕೂಲವಿದ್ದಾಗ ಸಂಧಾನದಿಂದಾಗಲಿ, ಅವಶ್ಯಕತೆಯಿಂದಾಗಲೀ ನಾಯಕತ್ವ ಪಡೆಯುತ್ತಾರೆ.

೨೦) ಜಾತಕದಲ್ಲಿ ರವಿ- ಮಂಗಳ- ಗುರುಗಳು ಬಲಾಢ್ಯರಿದ್ದರೆ ಇಂಥವರು ಜನ್ಮತಃ ನಾಯಕತ್ವದ ಗುಣಧರ್ಮ ಹೊಂದಿರುತ್ತಾರೆ.

೨೧) ಚಂದ್ರನು ಪುರುಷರಾಶಿಯಲ್ಲಿಯೂ ಮಂಗಳನು ಅಗ್ನಿತತ್ವ ಇಲ್ಲವೆ ಭೂತತ್ವ ರಾಶಿಯವನಾಗಿದ್ದ ಜಾತಕನು ಸ್ವಯಂ ರೂಪಿತ ನಾಯಕನಾಗುತ್ತಾನೆ.

೨೨) ಬುಧ-ಗುರು-ಚಂದ್ರರು ಬಲಾಢ್ಯರಿದ್ದ ಜಾತಕನು ಘಟನಾತ್ಮಕ ನಾಯಕತ್ವವನ್ನು ಪಡೆಯುತ್ತಾನೆ.

೨೩) ಭಾಗ್ಯ-ದ್ವಿತೀಯ-ಚತುರ್ಥ-ಸ್ಥಾನಗಳು ಬಲಾಢ್ಯರಿದ್ದ ವ್ಯಕ್ತಿಗಳು ಮನೆತನದ ಸೊತ್ತಾಗಿ ನಾಯಕತ್ವವನ್ನು ಪಡೆದಿರುತ್ತಾರೆ.

## (೨) ಪಕ್ಷ—ಸಂಸ್ಥೆಗಳ ಪ್ರಭಾವ:

ಅಭ್ಯರ್ಥಿಯ ಜಯ-ಅಪಜಯ ಪಕ್ಷಗಳ ಬಲಾಬಲದ ಪ್ರಭಾವಗಳ ಮೇಲೆ ಆಧಾರ ಪಟ್ಟಿರುತ್ತದೆ. ಅಭ್ಯರ್ಥಿಯ ಚುನಾವಣಾ ಪರಿಣಾಮದ ಭವಿಷ್ಯ ನುಡಿಯಬೇಕಾದರೆ, ಅಭ್ಯರ್ಥಿಯ ಜಾತಕ ಹಾಗೂ ಪಕ್ಷ-ಸಂಸ್ಥೆಗಳ ಜಾತಕಗಳ ತುಲನಾತ್ಮಕ ವಿಶ್ಲೇಷಣೆ ಮಾಡಬೇಕಾಗುತ್ತದೆ.

ವ್ಯಕ್ತಿಯ ಜೀವನದಲ್ಲಿ ಏರು ಪೇರುಗಳಿರುವಂತೆ ಪಕ್ಷ-ಸಂಸ್ಥೆಗಳ ಜೀವನದಲ್ಲಿಯೂ ಏರು ಪೇರುಗಳು ಇರುತ್ತವೆ. ಉದಾ :—೨೮-೧೨-೧೮೮೫ ನೇ ಮಧ್ಯಾಹ್ನ ೧ ಘಂಟೆಗೆ ಜನ್ಮಿಸಿದ ರಾಷ್ಟ್ರೀಯ ಮಹಾ ಸಂಸ್ಥೆಯಾದ ಕಾಂಗ್ರೇಸ್ ಪಕ್ಷವು ೧೯೬೯ರ ಗೋಚರಿ ಅಷ್ಟಮ ಶನಿಯ ಪ್ರಭಾವದಿಂದ ಇಬ್ಭಾಗವಾದ ಸಂಗತಿ ಎಲ್ಲರೂ ಬಲ್ಲರು. ಆದುದರಿಂದ ಚುನಾವಣಾ ವೇಳೆಯಲ್ಲಿ ಯಾವ ಪಕ್ಷದ ಗ್ರಹಬಲ ಹೇಗಿದೆ ? ಎನ್ನುವುದರ ಮೇಲೆ ಆ ಪಕ್ಷದ ಸಂಸ್ಥೆಯ ಪರಿಣಾಮ ಆಧಾರ ಪಟ್ಟಿರುತ್ತದೆ. ಅಂತೆಯೇ ಅಭ್ಯರ್ಥಿಯ ಜಾತಕದಲ್ಲಿಯ ಗ್ರಹಗಳ ಬಲಾಬಲ ಹೇಗಿದೆ ಎಂಬುವದರೊಡನೆ ಆ ಅಭ್ಯರ್ಥಿ ಯಾವ ಪಕ್ಷದಿಂದ ಸ್ಪರ್ಧಿಸುತ್ತಿದ್ದಾನೆ. ಆ ಪಕ್ಷದ ಗ್ರಹಬಲ ಆ ವೇಳೆಯಲ್ಲಿ ಹೇಗಿದೆ, ಆ ಜಾತಕನ ಗ್ರಹಬಲಕ್ಕೂ ಪಕ್ಷದ ಗ್ರಹಬಲಕ್ಕೂ ಒಟ್ಟು ಪರಿಣಾಮವೇನು ಮೊದಲಾದ ಎಲ್ಲ ಅಂಶಗಳು ಜಯ, ಅಪಜಯವನ್ನು ನಿರ್ಧರಿಸುತ್ತವೆ. ಈ ದೃಷ್ಟಿಯಿಂದ ರಾಷ್ಟ್ರದ ಬೇರೆ ಬೇರೆ ರಾಜಕೀಯ ಪಕ್ಷಗಳ ಜಾತಕ ಹಾಗೂ ಸ್ಪರ್ಧಿಸಬೇಕೆಂದಿರುವ ಸಂಘ-ಸಂಸ್ಥೆಯ ಜಾತಕವನ್ನು ಪರಿಶೀಲಿಸುವದು ಅತ್ಯವಶ್ಯವಿದೆ. ಇವುಗಳ ವಿವೇಚನೆಯನ್ನು ಇದೇ ಪುಸ್ತಕದ ಐದನೇಯ ಪ್ರಕರಣದಲ್ಲಿ ಕೊಡಲಾಗಿದೆ.

## (೩) ಪಕ್ಷ – ಸಂಸ್ಥೆಗಳ ಧುರೀಣರ ಪ್ರಭಾವ:

ಭಾರತದಲ್ಲಿಯ ಸ್ವಾತಂತ್ರ್ಯದ ನಂತರದ ಎರಡು ದಶಕಗಳ ರಾಜಕೀಯವಾಗಲಿ ಸ್ವಾತಂತ್ರ್ಯ ಪೂರ್ವದ ಸ್ವಾತಂತ್ರ್ಯ ಹೋರಾಟದ ಕಾಲವಾಗಲಿ ಪರಿಶೀಲಿಸಿ ನೋಡಿದಾಗ ಭಾರತದಲ್ಲಿ ವ್ಯಕ್ತಿ ಪೂಜೆಗೆ (Heroworship) ಬಹಳಷ್ಟು ಮಹತ್ವವಿದೆ ಎಂದು ಹೇಳಬಹುದು. ಸ್ವಾತಂತ್ರ್ಯ ಹೋರಾಟ ಕಾಲದ ನಾಯಕ ಮಹಾತ್ಮಾ ಗಾಂಧೀಯಾದರೆ ಸ್ವಾತಂತ್ರ್ಯ ನಂತರದ ನಾಯಕ ಜವಾಹರಲಾಲ ನೆಹರು ಎಂದು ಸ್ಪಷ್ಟವಾಗಿದೆ. ನೆಹರು ನಿಧನದ ನಂತರ ಇಂದಿರಾ ಗಾಂಧಿಯವರ ವ್ಯಕ್ತಿತ್ವದ ಪ್ರಭಾವವಂತೂ ಇತ್ತೀಚಿನ ೧೯೭೧ರಲ್ಲಿ ನಡೆದ ನಡುಗಾಲ ಚುನಾವಣೆಯಲ್ಲಿ ಸ್ಪಷ್ಟವಾಗಿದೆ. ಆದುದರಿಂದ ಚುನಾವಣೆಯ ಫಲಿತಾಂಶ ವಿಶ್ಲೇಷಿಸುವಾಗ ಯಾವ ಅಭ್ಯರ್ಥಿ ಯಾವ ಪಕ್ಷದಿಂದ ಸ್ಪರ್ಧಿಸುತ್ತಾನೆ ಎಂಬುವದರಷ್ಟೇ, ಯಾವ ಪಕ್ಷದ ನಾಯಕರು (ಗುಂಪಿನ ಸಂಸ್ಥೆಯ ಧುರೀಣರು) ಎಂಬುವದು ಮಹತ್ವವಾದದ್ದು. ಆದ್ದರಿಂದ ಪಕ್ಷಗಳ ನಾಯಕರ ಜಾತಕ ಹೇಗೆ ಇದೆ? ಅವರಿಗೆ ಜಯಾಪಜಯ ಹೇಗಿದೆ? ಎಂಬುವದನ್ನು ಪರಿಶೀಲಿಸುವದು ಅವಶ್ಯವಿದೆ.

ರಾಷ್ಟ್ರೀಯ ಚುನಾವಣೆಯಲ್ಲಿ ರಾಷ್ಟ್ರೀಯ ಪಕ್ಷಗಳ ನಾಯಕರ ಜಾತಕ ಪರಿಶೀಲಿಸಬೇಕಾದಂತೆ ರಾಜ್ಯಗಳ ಚುನಾವಣೆಯಲ್ಲಿ, ರಾಜ್ಯಪಕ್ಷ ನಾಯಕರ ಜಾತಕಗಳನ್ನು, ಮಹಾನಗರ ಸಭೆ (ಕಾರ್ಪೋರೇಶನ್), ನಗರಸಭೆ, (ಮುನಿಸಿಪಾಲ್ಟಿ) ನಗರ ಪಾಲಿಕೆ, ಪಂಚಾಯತಿ, ಜಿಲ್ಲಾ ಪರಿಷತ್ತು, ತಾಲೂಕಾ ಅಭಿವೃದ್ಧಿ ಮಂಡಳ, ಮೊದಲಾದ ಸಂಸ್ಥೆಗಳ ನಾಯಕರ, ಗುಂಪಿನ ಧುರೀಣರ, ಜಾತಕಗಳನ್ನು ಪರಿಶೀಲಿಸುವದು ಅತ್ಯವಶ್ಯಕವಿದೆ. ಇವುಗಳ ವಿಶ್ಲೇಷಣೆಯನ್ನು ಇದೇ ಪುಸ್ತಕದ ಐದನೇಯ ಪ್ರಕರಣದಲ್ಲಿ ಕೊಡಲಾಗಿದೆ.

## (೪) ಜಾತಿ-ವರ್ಗಗಳ ಬಲಾಬಲ:

ಭಾರತ ಜಾತ್ಯಾತೀತ, ವರ್ಗಾತೀತ, ಪ್ರಜಾಸತ್ತೆಯನ್ನು ಸಾಧಿಸಬೇಕೆಂದು, ಘಟನೆಯಲ್ಲಿ (ಸಂವಿಧಾನದಲ್ಲಿ) ರೂಪಿಸಿಕೊಂಡಿದೆ. ಇದು

ನಮ್ಮ ರಾಜಕೀಯ ಪದ್ಧತಿಯ ಗುರಿ ಅಥವಾ ಧ್ಯೇಯವಾಗಿದೇನೋ ನಿಜ. ಆದರೆ ಇದು ಎಷ್ಟರ ಮಟ್ಟಿಗೆ ರೂಢಿಯಲ್ಲಿ ಸಾಧ್ಯವಾಗಿದೆ ಎಂಬುವದು ಒಂದು ದೊಡ್ಡ ಪ್ರಶ್ನಾರ್ಥಕ ಚಿನ್ಹವೇ ಆಗಿದೆ.

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ, ಧರ್ಮ, ಮತ, ವರ್ಗಗಳು, ಅನೇಕ ಶತಮಾನಗಳಿಂದ ಬೇರುಬಿಟ್ಟಿರುವದರಿಂದ ನಾವು ಭಾರತದ ಯಾವದೇ ಸಾಮಾಜಿಕ ಕ್ರಿಯೆಯನ್ನಾಗಲಿ, ಕಾರ್ಯವನ್ನಾಗಲಿ ಜಾತಿಯ ಚೌಕಟ್ಟಿನ ಹೊರಗೆ ವಿಶ್ಲೇಷಿಸಲು ಸಾಧ್ಯವಾಗದಂತೆ ಆಗಿದೆ. ಹೀಗಾಗಿ ಚುನಾವಣೆಯಲ್ಲಿಯೂ ಜಾತೀಯ ಪ್ರಭಾವ ಅನಿವಾರ್ಯವಾಗಿ ಪರಿಶೀಲಿಸಲ್ಪಡಬೇಕಾಗುತ್ತದೆ. ಸಮಗ್ರ ಭಾರತದ ಎಲ್ಲ ರಾಜಗಳಲ್ಲಿಯೂ ಜಾತ್ಯಾಂಧ ರಾಜಕೀಯವನ್ನೇ ನೋಡುತ್ತೇವೆ. ಜಾತಿ ರಾಜಕೀಯ ಪ್ರಭಾವಿಗುಂಪೊಂದು ಒಪ್ಪಿಕೊಳ್ಳುವ ಮಟ್ಟಿಗೆ ನಮ್ಮ ಪ್ರಜಾಸತ್ತೆಯ ಒಲವು ನಿಲವು ತೋರುತ್ತದೆ ಹೀಗಾಗಿ ಚುನಾವಣೆಯ ಫಲಿತಾಂಶದ ಬಗ್ಗೆ ಪರಿಶೀಲಿಸಬೇಕಾದಾಗ ಆ ಅಭ್ಯರ್ಥಿಯ ಜಾತಿಯ ಬಗ್ಗೆ ಅಷ್ಟೆ ಅಲ್ಲ, ಅಭ್ಯರ್ಥಿ ನಿಲ್ಲುವ ಮತದಾರರ ಕ್ಷೇತ್ರದಲ್ಲಿ ಯಾವ ಜಾತಿಯ ಜನರು ಹೆಚ್ಚಿದ್ದಾರೆ. ಯಾವ ಯಾವ ಜಾತಿಯ ಮತದಾರರ ಮತ ಆಯಾ ಅಭ್ಯರ್ಥಿಗೆ ದೊರೆತೀತು ಮೊದಲಾದ ವಿಷಯವನ್ನು ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲೆ ಪರಿಶೀಲಿಸಬೇಕಾಗುತ್ತದೆ. ಇದೇ ರೀತಿ ವರ್ಗವೂ ಚುನಾವಣೆಯಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತದೆ. ವ್ಯಾಪಾರಸ್ಥ ಚುನಾವಣೆಗೆ ನಿಂತಾಗ ವ್ಯಾಪಾರಸ್ಥರ ಬೆಂಬಲ ದೊರೆಯಬಹುದೆಂದೂ, ಕಾರ್ಮಿಕ ನಾಯಕನಿಗೆ ಕಾರ್ಮಿಕರ ಬೆಂಬಲ ದೊರೆಯಬಹುದೆಂದು ನಿರೀಕ್ಷಿಸುತ್ತೇವೆ. ಆದರೆ ಇದನ್ನು ಜ್ಯೋತಿಷ್ಯ ಶಾಸ್ತ್ರ ನೋಡುವ ರೀತಿಯೇ ಬೇರೆ. ಬೇರೆ ಬೇರೆ ಗ್ರಹಗಳು ಬೇರೆ ಬೇರೆ ವರ್ಗಗಳಿಗೆ ಅನುಕೂಲವಿರುತ್ತವೆ. ಚುನಾವಣೆಯಲ್ಲಿ ಸ್ಪರ್ಧಿಸುವ ಹುರಿಯಾಳುಗಳಿಗೆ ವಿಶಿಷ್ಠ ಜಾತಿಯ ವಿಶಿಷ್ಠ ವರ್ಗಗಳ ಬೆಂಬಲ ಯಾವಾಗಲೂ ದೊರೆಯುತ್ತಿರುವುದನ್ನು ಕಾಣುತ್ತೇವೆ. ಇದನ್ನು ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲೆ ಪರಿಶೀಲಿಸುವಾಗ ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ಗ್ರಹಗಳಲ್ಲಿಯೂ ರಾಶಿಗಳಲ್ಲಿಯೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಮೊದಲಾದ ವಿಭಾಗಗಳಿವೆ. ಅಭ್ಯರ್ಥಿಯ ಜಾತಕದಲ್ಲಿ ಯಾವ ಗ್ರಹ

ಗಳು ಯಾವ ರಾಶಿಯು ಪೂರಕ ಪೋಷಕವೂ ಇದ್ದರೆ, ಆಯಾ ವರ್ಗದ, ಆಯಾ ಜಾತಿಯ, ಆಯಾ ಗುಂಪಿನ ಬೆಂಬಲ ಹೆಚ್ಚಾಗಿ ಸಿಗಬಹುದೆಂದು ಹೇಳಲು ಸಾಧ್ಯವಾಗುತ್ತದೆ. ಇದರ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಕೊಡಲಾಗಿದೆ.

೧) ಜಾತಕದಲ್ಲಿ ಗುರು, ಶುಕ್ರ, ಬಲಾಢ್ಯರಿದ್ದರೆ, ಬ್ರಾಹ್ಮಣ ಜಾತಿಯ ಬೆಂಬಲ ಅರ್ಥಾತ್ ಮತಗಳನ್ನು ಹೆಚ್ಚು ಪಡೆಯುತ್ತಾರೆ.

೨) ಜಾತಕದಲ್ಲಿ ರವಿ, ಮಂಗಳರು ಬಲಾಢ್ಯರಿದ್ದರೆ, ರಜಪೂತ, ಮರಾಠಾ, ಪಟೇಲ, ರಡ್ಡಿ, ಪಟ್ಟೇಗಾರ, ಮೊದಲಾದ ಕ್ಷತ್ರಿಯ ವರ್ಗದವರ ಬೆಂಬಲ ಹೆಚ್ಚು ಪಡೆಯುತ್ತಾರೆ.

೩) ಜಾತಕದಲ್ಲಿ ಬುಧ, ಚಂದ್ರರು ಬಲಾಢ್ಯರಿದ್ದರೆ ಅದರಲ್ಲಿಯೂ ಬುಧನು ಬಲಿಷ್ಠನಿದ್ದರೆ ಮಾರವಾಡಿ, ಕೊಮಟಿಗರ, ಲಿಂಗಾಯತ, ಮೊದಲಾದ ವ್ಯಾಪಾರಸ್ಥ ವರ್ಗದವರ ಬೆಂಬಲ ಅಧಿಕವಾಗಿ ಸಿಗುತ್ತದೆ.

೪) ಜಾತಕದಲ್ಲಿ ಶನಿ–ರಾಹುಗಳು ಬಲಾಢ್ಯರಿದ್ದರೆ, ಹಿಂದುಳಿದ ವರ್ಗದವರ,ಅಲ್ಪಸಂಖ್ಯಾಕರ,ಹರಿಜನ, ಗಿರಿಜನ, ಮುಸಲ್ಮಾನ ಮೊದಲಾದ ಜಾತಿಗಳ ಬೆಂಬಲ ಸಿಗುತ್ತದೆ.

೫) ಬುಧ, ಚಂದ್ರರು ಬಲಾಢ್ಯರಿದ್ದ ಜಾತಕನಿಗೆ ಯುವಕರ ಬೆಂಬಲ ಸದಾ ಸಿಗುತ್ತದೆ.

೬) ಗುರು, ಶನಿಯರು ಬಲಾಢ್ಯರಿದ್ದ ಜಾತಕನಿಗೆ ವೃದ್ಧರ,ನಿವೃತ್ತಿ ನೌಕರರ, ಮನೆಯ ಹಿರಿಯರ, ಬೆಂಬಲ ಅಧಿಕ ಸಿಗುತ್ತದೆ.

೭) ಶುಕ್ರ–ಚಂದ್ರರು ಬಲಾಢ್ಯರಿದ್ದ ಜಾತಕನಿಗೆ ಮಹಿಳೆಯರ ಬೆಂಬಲ ಸದಾ ಸಿಗುತ್ತದೆ.

೮) ಶನಿ–ಗುರುಗಳು ಬಲಾಢ್ಯರಿದ್ದ ಜಾತಕನಿಗೆ ವಕೀಲ ವರ್ಗದ ಜನರ ಬೆಂಬಲ ಸದಾ ಲಭಿಸುತ್ತದೆ.

೯) ರವಿಯು ಬಲಾಢ್ಯನಿದ್ದ ಜಾತಕನಿಗೆ ಅಧಿಕಾರಿ ವರ್ಗದವರ ಬೆಂಬಲವು; ರವಿ-ಗುರುಗಳ ಬೆಂಬಲವಿದ್ದ ಜಾತಕನಿಗೆ ಸರಕಾರಿ ನೌಕರರ ಅರ್ಥಾತ್ ಸಿಬ್ಬಂದೀ ವರ್ಗದವರ ಬೆಂಬಲ ಲಭಿಸುತ್ತದೆ.

೧೦) ಶನಿಯು ಬಲಾಢ್ಯನಿದ್ದ ಜಾತಕನಿಗೆ ಕಾರ್ಖಾನೆ, ಗಿರಣಿ ಕೆಲಸಗಾರರ ಬೆಂಬಲ ಸಿಗುತ್ತದೆ.

೧೧) ಗುರು-ಶನಿಯರು ಬಲಾಢ್ಯನಿದ್ದ ಜಾತಕನಿಗೆ ಮಠಾಧೀಶರ ಬೆಂಬಲ ಸದಾ ಸಿಗುತ್ತದೆ.

೧೨) ಶನಿ-ಚಂದ್ರರು ಬಲಾಢ್ಯರಿದ್ದ ಜಾತಕನಿಗೆ ಒಕ್ಕಲತನ ಬೇಸಾಯ ಮಾಡುವ ಒಕ್ಕಲಿಗರ ಬೆಂಬಲ ಸಿಗುತ್ತದೆ.

೧೩) ರವಿ-ಮಂಗಳರು ಬಲಾಢ್ಯನಿದ್ದ ಜಾತಕನಿಗೆ ಪುರುಷರ ಬೆಂಬಲ ಸಿಗುತ್ತದೆ.

೧೪) ಶುಕ್ರ-ಚಂದ್ರರು ಬಲಾಢ್ಯನಿದ್ದ ಜಾತಕನಿಗೆ ಕಲಾಕಾರರ ಬೆಂಬಲ ಸಿಗುತ್ತದೆ.

೧೫) ಬುಧ, ಚಂದ್ರ, ಶುಕ್ರರು ಬಲಾಢ್ಯರಿದ್ದ ಜಾತಕನಿಗೆ ಪತ್ರಿಕೆಗಳ, ಪತ್ರಿಕೋದ್ಯಮಿಗಳ ಬೆಂಬಲ ಸದಾ ಸಿಗುತ್ತದೆ.

೧೬) ಬುಧ, ಗುರು, ಚಂದ್ರರು ಬಲಾಢ್ಯರಿದ್ದ ಜಾತಕನಿಗೆ ವಿದ್ಯಾರ್ಥಿಗಳ ಬೆಂಬಲ ಸದಾ ಲಭಿಸುತ್ತದೆ

೧೭) ಶುಕ್ರ, ಚಂದ್ರ, ಷಷ್ಠೇಶರು ಬಲಾಢ್ಯರಿದ್ದ ಜಾತಕನಿಗೆ ಹೋಟಲು ವರ್ಗದವರ ಬೆಂಬಲ ಸಿಗುತ್ತದೆ.

೧೮) ಜಾತಕದಲ್ಲಿ ಚಂದ್ರನು ನಿರ್ಬಲನಿದ್ದರೆ ಅಥವಾ ಚಂದ್ರ,-ಶನಿ, ಚಂದ್ರ, ರಾಹುಗಳ ಯುತಿಯೋಗ ಇದ್ದರೆ ಅಥವಾ ಶನಿಯಿಂದ ದೃಷ್ಟಿಸಲ್ಪಟ್ಟ ಚಂದ್ರನು ಲಗ್ನ, ಚತುರ್ಥ, ಷಷ್ಠ, ವ್ಯಯದಲ್ಲಿದ್ದರೆ ಇಂಥ ಅಭ್ಯರ್ಥಿಗೆ ಸ್ವಜನ ವಿರೋಧ ಅರ್ಥಾತ್ ಸ್ವಜಾತೀಯ, ಬಂಧು-ಬಳಗದವರ ವಿರೋಧ ಹೆಚ್ಚಾಗುತ್ತದೆ.

೧೯) ಮಿಥುನ, ತುಲಾ, ಕುಂಭ, ಕರ್ಕ, ಮೀನ ಈ ರಾಶಿಯ ಜನರಿಗೆ ವಿದ್ಯಾರ್ಥಿಗಳ ಶಿಕ್ಷಕರ, ಬುದ್ಧಿಜೀವಿಗಳ ಬೆಂಬಲ ಸದಾ ಸಿಗುತ್ತದೆ.

೨೦) ಅನೇಕ ಗ್ರಹಗಳ ದೃಷ್ಟಿ ಲಗ್ನ, ಚತುರ್ಥದಲ್ಲಿದ್ದರೆ ಸ್ವಜನ-ಸ್ವಜಾತಿ ವಿರೋಧ ಬಹಳ.

೨೧) ಮೇಷ, ಮಿಥುನ, ಸಿಂಹ ತುಲಾ, ಧನು, ವೃಶ್ಚಿಕ ಮಕರ, ಕುಂಭ ಈ ರಾಶಿಯ ಜನರಿಗೆ ಪುರುಷರ ಮತಗಳು ಹೆಚ್ಚು ಲಭಿಸುತ್ತವೆ.

೨೨) ಮಿಥುನ, ತುಲಾ, ಕುಂಭ, ಕರ್ಕ, ಮೀನ, ಮಕರ, ವೃಶ್ಚಿಕ ಈ ರಾಶಿಯ ಜನರಿಗೆ ಕಾರ್ಮಿಕರ ಬೆಂಬಲ ಸಿಗುತ್ತದೆ.

೨೩) ಮೇಷ, ಸಿಂಹ, ಮಿಥುನ, ಮಕರ, ವೃಶ್ಚಿಕ, ಕುಂಭ, ತುಲಾ, ಧನು ಈ ರಾಶಿಯ ಜನರಿಗೆ ಅಧಿಕಾರಿ ವರ್ಗದವರ ಬೆಂಬಲ ಸದಾ ದೊರೆಯುತ್ತದೆ.

೨೪) ಮಿಥುನ, ತುಲಾ, ಕುಂಭ, ಕರ್ಕ, ಮೀನ ಇವರಿಗೆ ಯುವಕರ ಬೆಂಬಲ ಸದಾ ಸಿಗುತ್ತದೆ.

೨೫) ವೃಷಭ, ಕರ್ಕ, ತುಲಾ, ಮಿಥುನ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ರಾಶಿಯವರಿಗೆ ಮಹಿಳೆಯರ ಬೆಂಬಲ ಸದಾ ಲಭಿಸುತ್ತದೆ.

೨೬) ಮೇಷ, ಸಿಂಹ, ಧನು ಈ ರಾಶಿಯವರಿಗೆ ಕ್ಷತ್ರಿಯ ವರ್ಗದವರ ಬೆಂಬಲ ಸಿಗುತ್ತದೆ.

೨೭) ವೃಷಭ, ಕನ್ಯಾ, ಮಕರ ಈ ರಾಶಿಯವರಿಗೆ ವೈಶ್ಯ ವರ್ಗದವರ ಬೆಂಬಲವೂ ದೊರೆಯುತ್ತದೆ.

೨೮) ಮಿಥುನ, ತುಲಾ, ಕುಂಭ ಇವರಿಗೆ ಶೂದ್ರ ವರ್ಗದವರ ಬೆಂಬಲವೂ ಸಿಗುತ್ತದೆ.

೨೯) ಕರ್ಕ, ವೃಶ್ಚಿಕ, ಮೀನ ಇವರಿಗೆ ಬ್ರಾಹ್ಮಣ ವರ್ಗದ ಬೆಂಬಲ ಸಿಗುತ್ತದೆ.

೩೦) ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ವೃಶ್ಚಿಕ ಮೀನ ಈ ಲಗ್ನದವರಿಗೆ ಸ್ತ್ರೀಯರ ಮತಗಳು ಹೆಚ್ಚು ಲಭಿಸುತ್ತವೆ.

೩೧) ಮೇಷ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರಿಗೆ ಪುರುಷರ ಮತಗಳು ಹೆಚ್ಚು ಲಭಿಸುತ್ತವೆ.

೩೨) ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ವೃಶ್ಚಿಕ, ಧನು, ಮಕರ, ಮೀನ ಈ ಲಗ್ನದವರಿಗೆ ಯುವಕರ ಮತಗಳು ಹೆಚ್ಚು ಸಿಗುತ್ತವೆ.

೩೩) ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮೀನ ಈ ಲಗ್ನದವರಿಗೆ ನಿವೃತ್ತಿ ವರ್ಗದ ಜನರ (ಪೆನಶನ್ ದಾರರ) ಮತ ದೊರೆಯುತ್ತವೆ.

೩೪) ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರಿಗೆ ಅಲ್ಪ ಸಂಖ್ಯಾಕರ, ಹಿಂದುಳಿದ ವರ್ಗದವರ ಕಾರ್ಮಿಕರ ಬೆಂಬಲ ಸದಾ ಲಭಿಸುತ್ತದೆ.

೩೫) ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು ಈ ವರ್ಗದ ಜನರಿಗೆ ಸರ್ಕಾರಿ ನೌಕರಿ ವರ್ಗದವರ ಬೆಂಬಲ ಸಿಗುತ್ತದೆ.

೩೬) ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ಧನು, ಮಕರ, ಮೀನ ಈ ಲಗ್ನದವರಿಗೆ ವಾಣಿಜ್ಯ (ವ್ಯಾಪಾರಸ್ಥ) ವರ್ಗದವರ ಬೆಂಬಲ ದೊರೆಯುತ್ತದೆ.

೩೭) ಜಾತಕದಲ್ಲಿ ಲಗ್ನ, ಷಷ್ಠ, ದಶಮ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿದ್ದರೆ ಸ್ವತಂತ್ರ ಉದ್ಯೋಗಸ್ಥರ ಬೆಂಬಲ ದೊರೆಯುತ್ತದೆ.

೩೮) ಲಗ್ನ, ಚತುರ್ಥ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿದ್ದರೆ, ಸ್ವಜನ ಹಾಗೂ ಸ್ವಜಾತಿಯ ಬೆಂಬಲ ಸಿಗುತ್ತದೆ. ಈ ಸ್ಥಾನಾಧೀಶರು ಹಾಗೂ ಸ್ಥಾನಗಳು ನಿರ್ಬಲರಿದ್ದರೆ ಸ್ವಜನ ವಿರೋಧ ಉಂಟಾಗುತ್ತದೆ.

೩೯) ಲಗ್ನ, ಚತುರ್ಥ, ತೃತೀಯದಲ್ಲಿ ಅನೇಕ ಗ್ರಹಗಳಿದ್ದರೆ ಅಥವಾ ಲಗ್ನ-ಚತುರ್ಥದಲ್ಲಿ ಪಾಪ ಗ್ರಹಗಳಿದ್ದರೆ ಸ್ವಜನ ವಿರೋಧ ಉಂಟಾಗುತ್ತದೆ.

೪೦) ಅನೇಕ ಗ್ರಹಗಳು ಪುರುಷರ ರಾಶಿಯಲ್ಲಿದ್ದರೆ ಪುರುಷರ ಮತಗಳೂ ಹಾಗೂ ಸ್ತ್ರೀ ರಾಶಿಯಲ್ಲಿದ್ದರೆ ಸ್ತ್ರೀಯರ ಮತಗಳೂ ಲಭಿಸುತ್ತವೆ.

## (೫) ಪ್ರಚಾರದ ಪ್ರಭಾವ :

ಇದು ಪ್ರಚಾರ ಯುಗ. ಪ್ರಚಾರವನ್ನು ಬಳಸದ ಕ್ಷೇತ್ರವಿಲ್ಲ. ಗ್ರಾಹಕ-ವಸ್ತುಗಳ ಜಾಹೀರಾತುಗಳ ಹಾವಳಿಯನ್ನು ನೋಡಿದವರಿಗೆ ಈ ಪ್ರಚಾರದ ಪರಿಣಾಮದ ಪರಿಚಯವಿದೆ, "ನೂರು ಸಲ ಸುಳ್ಳನ್ನು ಒತ್ತಿ ಒತ್ತಿ ಹೇಳಿದರೆ, ಅದು ಸತ್ಯಕ್ಕಿಂತ ಸತ್ಯವಾಗಿ ತೋರುವದು" ಎಂಬ ಮಾತು ಪ್ರಚಾರದ ಬಗ್ಗೆ ಹೇಳಲಾಗುತ್ತದೆ. ಯಾವುದೇ ವ್ಯಕ್ತಿಯ ಪ್ರಭಾವ ಸಮಾಜದಲ್ಲಿ ಬೇರೂರಬೇಕಾದರೆ, ಪ್ರಚಾರದ ಪ್ರಭಾವ ಬಹಳ ಮುಖ್ಯ. **ಯಾವ ವ್ಯಕ್ತಿಯನ್ನೇ ಆಗಲಿ, ನಾಯಕನನ್ನಾಗಿ ಮಾಡುವ ಬೃಹತ್ ಶಕ್ತಿ ಪ್ರಚಾರಕ್ಕಿದ್ದರೆ, ಅಂತೆಯೇ ನಾಯಕನನ್ನು ನಾಲಾಯಕನನ್ನಾಗಿಸುವ ದೈತ್ಯ ಶಕ್ತಿಯೂ ಪ್ರಚಾರಕ್ಕಿದೆ.** ಇದೇ ರೀತಿ ಚುನಾವಣೆಯಲ್ಲಿ ವ್ಯಕ್ತಿಯ, ಗುಂಪಿನ, ಸಂಸ್ಥೆಯ, ಪಕ್ಷದ, ಪ್ರಚಾರದ ಓಘದ ಮೇಲೆ ಅಭ್ಯರ್ಥಿಯ ಜಯಾ-ಅಪಜಯಗಳು ಆಧಾರಪಟ್ಟಿರುತ್ತವೆ ಪ್ರಚಾರ ರಹಿತವಾದ ಉತ್ತಮ ತತ್ವಕ್ಕೆ, ವ್ಯಕ್ತಿಗೆ, ಪಕ್ಷಕ್ಕೆ, ಸೋಲು ಸಂಭವಿಸಲೂಬಹುದು. ಉತ್ತಮ ಪ್ರಚಾರ ಹೊಂದಿದ ದೈತ್ಯ ತತ್ವ-ವ್ಯಕ್ತಿ-ಪಕ್ಷಕ್ಕೆ ಜಯ ಲಭಿಸಲೂಬಹುದು. ಆದುದರಿಂದ ಚುನಾವಣೆಯಲ್ಲಿ ಯಾವ ಬಗೆಯ ಪರಿಣಾಮಕಾರಿ ಪ್ರಚಾರ ಯಾರು ಮಾಡಬಲ್ಲರು? ಯಾವ ಬಗೆಯ ಪ್ರಚಾರದಲ್ಲಿ ಅವರು ಯಶಸ್ವಿಯಾಗಬಲ್ಲರು? ಇವುಗಳನ್ನು ಪರಿಶೀಲಿಸುವದು ಅತ್ಯವಶ್ಯವಿದೆ.

ಚುನಾವಣೆಯಲ್ಲಿ ಬೇರೆ ಬೇರೆ ಪ್ರಚಾರದ ಸಾಧನಗಳನ್ನು ಬಳಸಲಾಗುತ್ತದೆ. ನಮ್ಮ ಅನುಭವದ ಪ್ರಕಾರ ಈ ಸಾಧನಗಳು ಹನ್ನೆರಡು

ರೀತಿಯದಾಗಿರುತ್ತವೆ. (೧) ಮೆರವಣಿಗೆಗಳು (೨) ಸಾರ್ವಜನಿಕ ಸಭೆಗಳು ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು (೩) ಧ್ವನಿವರ್ಧಕದ ಮೂಲಕ ಪ್ರಚಾರ (೪) ಪ್ರಚಾರದ ಭಿತ್ತಿಪತ್ರಿಕೆಗಳು (೫) ಪ್ರಚಾರದ ಫಲಕಗಳು (ಬ್ಯಾನರ್ ಮೊದಲಾದ) (೬) ಮನೆಮನೆಗೆ ಹೋಗಿ ಪ್ರಚಾರ (೭) ಜಾತಿಯ ಪ್ರಮುಖರ ಮೂಲಕ ಪ್ರಚಾರ (೮) ಸ್ಥಳೀಯ ನಾಯಕರ ಮೂಲಕ ಪ್ರಚಾರ (೯) ಜಾತೀಯ ಅಥವಾ ಗುಂಪಿನ ನಾಯಕರಿಗೆ ಬಹುಮಾನ, ಕಾಣಿಕೆ ಮೊದಲಾದ ಆಶೆ ತೋರಿಸುವಿಕೆ (೧೦) ಮತದಾರರಿಗೆ ಕಾಣಿಕೆ ಮೂಲಕ, (೧೧) ಬೆದರಿಕೆಯಿಂದ, ಒತ್ತಾಯದಿಂದ (೧೨) ಆಶ್ವಾಸನೆಗಳಿಂದ. ಇವುಗಳಲ್ಲಿ ಅಭ್ಯರ್ಥಿಯ ಜಾತಕದ ಮೇಲೆ ಯಾವ ಬಗೆಯ ಪ್ರಚಾರ ಯಾವ ಅಭ್ಯರ್ಥಿಗೆ ಹೆಚ್ಚು ಲಾಭ ದೊರಕೀತು ? ಹಾಗೂ ಯಾವ ಮತದಾರ ಯಾವ ಬಗೆಯ ಪ್ರಚಾರ ಸಾಧನದಿಂದ ಪ್ರಭಾವಿತನಾಗುತ್ತಾನೆ. ಜಾತಕದ ಪರಿಶೀಲನೆಯಿಂದ ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲಿನಿಂದ ಹೇಳಬಹುದು. ಇವುಗಳ ವಿಶ್ಲೇಷಣೆಯನ್ನು ಈ ಕೆಳಗೆ ಕೊಡಲಾಗಿದೆ.

**ಸಾಮಾನ್ಯ ನಿಯಮಗಳು:–**

**ಕಾರಕ ಗ್ರಹ :–** ಚುನಾವಣೆಯಲ್ಲಿ ಯಾವದೇ ವಿಧದಿಂದ ಪರಿಣಾಮಕಾರಿ ಪ್ರಚಾರ ಮಾಡುವ ವ್ಯಕ್ತಿಯ ಜಾತಕದಲ್ಲಿ ಬುಧನು ಬಲಾಢ್ಯನಿರಲೇಬೇಕು. ಏಕೆಂದರೆ ಜಾಹಿರಾತು, ಪ್ರಚಾರ ಮೊದಲಾದ ಗುಣಧರ್ಮಗಳು ಬುಧನಲ್ಲಿರುತ್ತವೆ. ಆದುದರಿಂದ ಬುಧನು ಜಾತಕದಲ್ಲಿ ಪೋಷಕನಿರದೇ ಯಾರೂ ಪರಿಣಾಮಕಾರಿಯಾಗಿ ಪ್ರಚಾರ ಮಾಡಲು ಸಾಧ್ಯವಿಲ್ಲ. ಬುಧನ ತರುವಾಯ ಶುಕ್ರನನ್ನು ಪರಿಶೀಲಿಸಬೇಕು. ಏಕೆಂದರೆ ಪ್ರಭಾವಿತ ಪ್ರಚಾರ ಅರ್ಥಾತ್ ಪರಿಣಾಮಕಾರೀ ಜಾಹೀರಾತು ಮಾಡುವದು ಒಂದು ಕಲೆ ಇರುತ್ತದೆ. ಜಾಹೀರಾತಿನ ಉದ್ದಿಷ್ಟ, ಜಾಹೀರಾತಿನ ಕಾರ್ಯವಿಸ್ತರಣೆ, ಸಾಮಾಜಿಕ ನೀತಿ, ಇವು ಶುಕ್ರನ ಗುಣಧರ್ಮಗಳು. ಬುಧ, ಶುಕ್ರರ ತರುವಾಯ ಚಂದ್ರನನ್ನು ಪರಿಶೀಲಿಸಬೇಕು. ಏಕೆಂದರೆ ಸಾರ್ವಜನಿಕ ಸಂಪರ್ಕ, ಮನಃಶಾಸ್ತ್ರ, ಪ್ರಜಾಸತ್ತಾತ್ಮಕ ಜಾಹೀರಾತು ಈ ಮೊದಲಾದ

ವಿಷಯಗಳ ಮೇಲೆ ಚಂದ್ರನ ಅಧಿಪತ್ಯವಿರುತ್ತದೆ. ಆದುದರಿಂದ ಬುಧ ಶುಕ್ರ, ಚಂದ್ರರು ಪೋಷಕರೂ ಪೂರಕರೂ ಇದ್ದ ಜಾತಕನು ಪರಿಣಾಮಕಾರಿಯಾದ ಪ್ರಚಾರ ಮಾಡಬಲ್ಲನು.

**ಕಾರಕ ಸ್ಥಾನ**:-ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯ ಸ್ಥಾನವೇ ಕಾರಕಸ್ಥಾನ ತೃತೀಯ ಸ್ಥಾನ ಹಾಗೂ ತೃತೀಯಾಧೀಶರು ಬಲಾಢ್ಯರಿದ್ದ ವ್ಯಕ್ತಿಗಳು ಪ್ರಭಾವಿತ ಪ್ರಚಾರ ಮಾಡುವದರಲ್ಲಿ ಸಿದ್ಧಹಸ್ತರಿರುತ್ತಾರೆ. ತೃತೀಯ ಸ್ಥಾನದ ನಂತರ ಲಗ್ನ–ಲಗ್ನೇಶ. ದ್ವಿತೀಯಸ್ಥಾನ–ದ್ವಿತಿಯೇಶರ ಬಲಾಬಲ ಪರಿಶೀಲಿಸಬೇಕು.

**ಲಗ್ನ**:-ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ, ಮೇಷ, ವೃಷಭ, ಮಿಥುನ. ಕರ್ಕ, ಸಿಂಹ, ಕನ್ಯಾ, ಮಕರ, ಕುಂಭ, ಮೀನ ಈ ಲಗ್ನದವರು ಪ್ರಭಾವಿತ ಪೂರ್ಣ ಪ್ರಚಾರ ಮಾಡಬಲ್ಲರು.

**ರಾಶಿ** :–ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ರಾಶಿಯ ಜನರು ಉತ್ತಮ ಪ್ರಚಾರ ಮಾಡಬಲ್ಲರು.

ಇನ್ನು ಚುನಾವಣೆಯಲ್ಲಿ ಬಳಕೆಯಲ್ಲಿರುವ ವಿಶಿಷ್ಟ ಪ್ರಕಾರದ ಸಾಧನಗಳಿಂದ ಪ್ರಚಾರ ಮಾಡಲು ವಿಶಿಷ್ಟ ತರಹದ ಯೋಗಗಳು ಇರ-ಬೇಕಾಗುತ್ತದೆ. ಅವುಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

೧) ಮಿಥುನ, ತುಲಾ, ಕುಂಭ, ಕರ್ಕ, ಮೀನ ಈ ರಾಶಿಯ ಜನರು ಉತ್ತಮ ಭಾಷಣಕಾರರಿದ್ದು, ಸಾರ್ವಜನಿಕ ಸಭೆಗಳಲ್ಲಿ ತಮ್ಮ ಪ್ರಭಾವೀ ಪೂರಿತ ಭಾಷಣಗಳಿಂದ ಮತಗಳನ್ನು ಪಡೆಯುವದರಲ್ಲಿ ಯಶಸ್ವಿಗಳಾಗಿರುತ್ತಾರೆ.

೨) ಬುಧ, ಚಂದ್ರ, ಗುರುಗಳು ವಾಯು ಇಲ್ಲವೇ ಭೂ-ರಾಶಿಯವರಾಗಿ ಲಗ್ನ, ದ್ವಿತೀಯ, ಪಂಚಮದಲ್ಲಿದ್ದವರು ಸಾರ್ವಜನಿಕ ಸಭೆಗಳ ಮುಖಾಂತರ ಪ್ರಚಾರ ಮಾಡಲು ಸಿದ್ಧಹಸ್ತರು.

೩) ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಧನು, ಮೀನ ಈ ಲಗ್ನದವರು ಸಾರ್ವಜನಿಕ ಸಭೆಗಳ ಮುಖಾಂತರ ಪ್ರಚಾರ ಮಾಡುವದರಲ್ಲಿ ಪಳಗಿದವರು.

೪) ಲಗ್ನ, ಪಂಚಮ, ದ್ವಿತೀಯ ಈ ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿರುವ ವ್ಯಕ್ತಿಗಳು ತಮ್ಮ ಪಾಂಡಿತ್ಯ ಪೂರ್ಣ ಅಸ್ಖಲಿತ ಮಾತುಗಳಿಂದ ಮತಗಳನ್ನು ಪಡೆಯುವದರಲ್ಲಿ ಸಿದ್ಧಹಸ್ತರು.

೫) ವೃಷಭ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯ ಜನರು ಮನೆ ಮನೆಗೆ ಹೋಗಿ ಪ್ರಚಾರಮಾಡಿ ಮತದಾರರ ಮನಸ್ಸನ್ನು ಪರಿವರ್ತಿಸುವದರಲ್ಲಿ ಪ್ರವೀಣನು.

೬) ಅನೇಕ ಗ್ರಹಗಳು ಸ್ತ್ರೀ-ರಾಶಿಯಲ್ಲಿದ್ದ ಜಾತಕನು ಮನೆ, ಮನೆಗೆ ಹೋಗಿ ಪ್ರಚಾರ ಮಾಡುವದರಲ್ಲಿ ಪರಿಣಿತನು.

೭) ಶುಕ್ರ, ಚಂದ್ರ, ಶನಿ, ಬುಧರು, ಬಲಾಢ್ಯರಿದ್ದ ಜಾತಕನು ಮನೆಮನೆಗೆ ಹೋಗಿ ಪ್ರಚಾರ ಕೈಕೊಳ್ಳುವದರಲ್ಲಿ ಸಿದ್ಧಹಸ್ತನು.

೮) ಮೇಷ, ವೃಷಭ, ಮಿಥುನ, ಕರ್ಕ. ತುಲಾ, ವೃಶ್ಚಿಕ, ಮಕರ ಕುಂಭ ಈ ಲಗ್ನದವರು ಮನೆ ಮನೆಗೆ ಹೋಗಿ ಮತಗಳನ್ನು ಪಡೆಯುವದರಲ್ಲಿ ಪ್ರಖ್ಯಾತರು.

೯) ಮೇಷ, ಕರ್ಕ, ಸಿಂಹ, ವೃಶ್ಚಿಕ, ಮೀನ, ಧನು ಈ ಲಗದವರು ಹೆದರಿಸಿ, ಬೆದರಿಸಿ, ಮತಗಳನ್ನು ಪಡೆಯುವದರಲ್ಲಿ ಪಳಗಿದವರು.

೧೦) ರವಿ, ಮಂಗಳ, ಗುರುಗಳು ಬಲಾಢ್ಯರಿದ್ದ ಜಾತಕನು ಹೆದರಿಸಿ, ಬೆದರಿಸಿ, ಮತಗಳನ್ನು ಪಡೆಯುವದರಲ್ಲಿ ಸಿದ್ಧ ಹಸ್ತನು.

೧೧) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿದ್ದ ಜಾತಕನು ಬೆದರಿಸಿ ಮತಗಳನ್ನು ಪಡೆಯುವದರಲ್ಲಿ ಪ್ರವೀಣನಿರುತ್ತಾನೆ.

೧೨) ಮಂಗಳನು ಮೇಷ, ಸಿಂಹ, ವೃಶ್ಚಿಕ, ಧನು, ಮಕರ ರಾಶಿಯವನಾಗಿದ್ದು, ಚಂದ್ರನು ಪುರುಷರಾಶಿಯಲ್ಲಿದ್ದ ವ್ಯಕ್ತಿಗಳು ಬೆದರಿಸಿ, ಹೆದರಿಸಿಯೇ ಮತಗಳನ್ನು ಪಡೆಯುತ್ತಾರೆ.

೧೩) ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಕುಂಭ ಈ ರಾಶಿಯುವರು ಹೆದರಿಸಿ,ಬೆದರಿಸಿ, ಮತಗಳನ್ನು ಪಡೆಯುವದರಲ್ಲಿ ಪ್ರಖ್ಯಾತರಿರುತ್ತಾರೆ.

೧೪) ಮೇಷ, ಸಿಂಹ, ವೃಶ್ಚಿಕ,ಧನು, ಮಕರ ಈ ರಾಶಿಯ ಜನರು ನಿಯಮ–ನಿರ್ಬಂಧನೆಗಳನ್ನು ಕಡ್ಡಾಯವಾಗಿ ಅಮಲಿನಲ್ಲಿ ತರುವದರಲ್ಲಿ ಪ್ರವೀಣರು. ಆದರೆ ಇವರ ನಿಷ್ಟುರ, ನೇರ, ಸ್ಪಷ್ಟ ಮಾತುಗಳಿಂದ ಮತಗಳನ್ನು ಒಡೆಯುವದೇ ವಿನಃ ಪಡೆಯುವದು ಆಗುವದಿಲ್ಲ. ಆದುದರಿಂದ ಇಂಥವರು ಸಾರ್ವಜನಿಕ ಸಭೆಗಳಿಂದ ದೂರವಿದ್ದಷ್ಟು ಕ್ಷೇಮ.

೧೫) ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯ ಜನರು ಮತದಾರರಿಗೆ ಆಶ್ವಾಸನೆ ನೀಡಿ ಮತ ಗಳಿಸುವದರಲ್ಲಿ ಪ್ರವೀಣರಿರುತ್ತಾರೆ.

೧೬) ಶುಕ್ರ, ಚಂದ್ರ, ಬುಧ, ಶನಿಯರು ಬಲಾಢ್ಯರಿದ್ದ ವ್ಯಕ್ತಿಗಳು ಕೇವಲ ಆಶ್ವಾಸನೆ ನೀಡಿಯೇ ಮತ ಪಡೆಯುತ್ತಾರೆ.

೧೭) ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರು ಆಶ್ವಾಸನೆಯಿಂದ ಮತ ಪಡೆಯುವದರಲ್ಲಿ ಸಿದ್ಧ ಹಸ್ತರು.

೧೮) ದ್ವಿತೀಯ, ಲಗ್ನ, ಪಂಚಮ ಈ ಸ್ಥಾನಗಳು ಹಾಗೂ ಸ್ಥಾನಾಧೀಶರ, ಬಲಾಢ್ಯರಿದ್ದ ವ್ಯಕ್ತಿಗಳು ಆಶ್ವಾಸನೆ ನೀಡಿ ಮತಗಳಿಸುವದರಲ್ಲಿ ಪ್ರವೀಣರು.

೧೯) ಧ್ವನಿವರ್ಧಕದ ಮೂಲಕ ಪ್ರಚಾರ ಕೈಕೊಳ್ಳುವದಾಗಲೀ, ಭಿತ್ತಿಪತ್ರಗಳ ಮೂಲಕ ಪ್ರಚಾರ ಕೈಕೊಳ್ಳುವದಾಗಲೀ ಫಲಕಗಳು, ಬ್ಯಾನರ್ ಮೊದಲಾದವುಗಳ ಮೂಲಕ ಪ್ರಚಾರ ಕೈಕೊಳ್ಳುವವರ ಜಾತಕದಲ್ಲಿ ಬುಧ, ಶುಕ್ರ, ಚಂದ್ರರು ಬಲಾಢ್ಯರಿದ್ದು, ತೃತೀಯ ಸ್ಥಾನ, ತೃತೀಯೇಶ ಪೋಷಕರಿರುವರಲ್ಲದೇ ಚಂದ್ರನು ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯುವನಿರುತ್ತಾನೆ. ಹಾಗೂ ಅನೇಕ ಗ್ರಹಗಳು ಭೂ ಇಲ್ಲವೆ ವಾಯು ರಾಶಿಗಳಲ್ಲಿ ಇರುತ್ತವೆ.

೨೦) ಜಾತೀಯ ಪ್ರಮುಖರ ಮೂಲಕ ಪ್ರಚಾರ ಮಾಡುವದಾಗಲೀ, ಸ್ಥಳೀಯ ನಾಯಕರ ಮೂಲಕ ಪ್ರಚಾರ ಮಾಡುವದಾಗಲೀ, ಜಾತೀಯ ಅಥವಾ ಗುಂಪಿನ ನಾಯಕನಿಗೆ ಬಹುಮಾನ, ಕಾಣಿಕೆ ಮೊದಲಾದವುಗಳ ಮುಖಾಂತರ ಪ್ರಚಾರ ಮಾಡುವ ವ್ಯಕ್ತಿಗಳ ಜಾತಕದಲ್ಲಿ ಬುಧ-ಚಂದ್ರರು ಬಲಾಢ್ಯರಿದ್ದು, ಲಗ್ನ, ಚತುರ್ಥ, ಸ್ಥಾನಗಳು ಪೋಷಕವಿರುತ್ತವೆ. ಇಂಥವರು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ರಾಶಿಯುವರಿರುತ್ತಾರೆ.

೨೧) ಮತದಾರರಿಗೆ ಕಾಣಿಕೆ ಸಲ್ಲಿಸಿ ಮತವನ್ನು ಪಡೆಯು ತಕ್ಕಂಥ ಅಭ್ಯರ್ಥಿಯು ಜಾತಕದಲ್ಲಿ ಬುಧ-ಚಂದ್ರರು ಬಲಾಢ್ಯರಿದ್ದು, ದಶಮು ಷಷ್ಠ ಸ್ಥಾನಗಳೂ ಸ್ಥಾನಾಧೀಶರೂ ಬಲಾಢ್ಯರಿರುತ್ತಾರೆ.

೨೨) ಮೆರವಣಿಗೆ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳ ಮುಖಾಂತರ ಪ್ರಚಾರ ಕೈಕೊಳ್ಳುವವರ ಜಾತಕದಲ್ಲಿ ಬುಧ, ಶುಕ್ರ, ಚಂದ್ರರು ಬಲಾಢ್ಯರಿದ್ದು, ಅನೇಕ ಗ್ರಹಗಳು ಭೂ ಇಲ್ಲವೇ ವಾಯು ರಾಶಿಯುವರಿರುತ್ತಾರೆ.

ಈ ವರೆಗೆ ಯಾವ ಅಭ್ಯರ್ಥಿಯು ಜಾತಕದಲ್ಲಿ ಯಾವ ಬಗೆಯು ಯೋಗಗಳಿದ್ದರೆ, ಯಾವ ಬಗೆಯು ಪ್ರಚಾರ ಕೈಕೊಳ್ಳಬಹುದು ? ಎಂದು ವಿವರಿಸಿದ್ದಾಯಿತು. ಇನ್ನು ಯಾವ ಮತದಾರ ಯಾವ ಬಗೆಯು ಪ್ರಚಾರ ಸಾಧನದಿಂದ ಪ್ರಭಾವಿತನಾಗುತ್ತಾನೆ ಎಂದು ಪರಿಶೀಲಿಸೋಣ.

೧) ಮಿಥುನ. ತುಲಾ, ಕುಂಭ, ಕರ್ಕ, ಮೀನ ಈ ರಾಶಿಯು ಜನರು ಸಾರ್ವಜನಿಕ ಸಭೆಗಳಲ್ಲಿಯ ಮಾತುಗಳಿಂದ ಪ್ರಭಾವಿತರಾಗುವರು.

೨) ಮೇಷ, ಸಿಂಹ, ಧನು, ಮಿಥುನ, ಕುಂಭ, ಮೀನ ಈ ರಾಶಿಯುವರು ತಾವು ನಂಬಿದ ಸಿದ್ಧಾಂತ, ತತ್ವ, ಪಕ್ಷಗಳಿಗೆ ಅಚಲರಿರು-ತ್ತಾರೆ.

೩) ವೃಷಭ, ಕರ್ಕ, ಕನ್ಯಾ ತುಲಾ, ವೃಶ್ಚಿಕ, ಮೀನ ಈ ರಾಶಿಯು ಜನರು ಕಾಣಿಕೆ, ಬಹುಮಾನ, ಆಶ್ವಾಸನೆ, ವ್ಯಕ್ತಿನಿಷ್ಠೆ, ಅಂದರೆ ತಾವು ನಂಬಿದ ನಾಯಕರ ಪ್ರಭಾವಕ್ಕೆ ಒಳಗಾಗುತ್ತಾರೆ.

೪) ಮಿಥುನ, ವೃಶ್ಚಿಕ, ಮಕರ, ಕುಂಭ ಈ ನಾಲ್ಕು ರಾಶಿಯವರು ಧೂರ್ತರೂ, ಚಾಣಾಕ್ಷರೂ ಇದ್ದು, ಇವರ ನೆಲೆ ತಿಳಿಯುವದೇ ಕಠಿಣವಿದ್ದು ತಮಗೆ ಎಲ್ಲಿ ಲಾಭ ಬರುವದೋ ಅಲ್ಲಿ ಮತ ಚಲಾಯಿಸುವರು.

೫) ಗುರು, ಮಂಗಳ ಬಲಾಢ್ಯರಿದ್ದ ವ್ಯಕ್ತಿಗಳು ತಾವು ನಂಬಿದ ತತ್ವಗಳಿಗೆ, ಸಿದ್ಧಾಂತಗಳಿಗೆ ಅನುಗುಣವಾಗಿ ಮತ ಚಲಾಯಿಸುವರು.

೬) ಬುಧ, ಶುಕ್ರ, ಚಂದ್ರ, ಶನಿಯರು ಬಲಾಢ್ಯರಿದ್ದ ವ್ಯಕ್ತಿಗಳು ತಮ್ಮ ನಾಯಕನ ಅಥವಾ ತಮ್ಮ ಜಾತೀಯ ಧುರೀಣರ ಮಾತಿನಂತೆ ಅಥವಾ ಕಾಣಿಕೆ, ಆಶ್ವಾಸನೆಗಳ ಪ್ರಭಾವದಿಂದ ಮತ ಚಲಾಯಿಸುವರು.

(೭) ಕರ್ಕ, ಮೀನ ಈ ರಾಶಿಯ ಜನರು ಹಾಗೂ ಶನಿ-ಚಂದ್ರ, ಚಂದ್ರ-ರಾಹುಗಳ ಯುತಿ ಯೋಗದ ಅಥವಾ ಶನಿಯಿಂದ ದೃಷ್ಟಿಸಲ್ಪಟ್ಟ ಚಂದ್ರನಿದ್ದ ಜಾತಕನು ಮತ್ತು ಲಗ್ನ-ಲಗ್ನೇಶ, ಚತುರ್ಥ-ಚತುರ್ಥೇಶ ನಿರ್ಬಲನಿದ್ದ ಜಾತಕನು ಅಸ್ಥಿರ, ಚಂಚಲ, ಸ್ವಭಾವದವನಿದ್ದು, ಮತ ಗಟ್ಟಿಗೆ ಹೋಗಿ ಮತ ಚಲಾಯಿಸುವವರೆಗೂ ಯಾರಿಗೆ ಮತ ನೀಡುವ ನೆಂಬುದು ಅನಿಶ್ಚತ ಇರುತ್ತದೆ.

## (೬) ಅಭ್ಯರ್ಥಿಗಳ ಆರ್ಥಿಕ ಬಲ :

ಚುನಾವಣೆಯು ಭಾರತದಲ್ಲಿ ಒಂದು ವ್ಯಾಪಾರವಾದಂತಾಗಿದೆ. ಏಕೆಂದರೆ ಭಾರತದಲ್ಲಿ ರಾಜಕಾರಣಿ, ರಾಜಕಾರಣ, ಒಂದು ವ್ಯಾಪಾರ ವಿದ್ದಂತೆ. ಎಷ್ಟು ಹಣ ಈ ವ್ಯಾಪಾರದಲ್ಲಿ ತೊಡಗಿಸಿದರೆ ಎಷ್ಟು ಲಾಭ ವಾದೀತೆಂದು ಲೆಖ್ಖ ಹಾಕುವ ರಾಜಕಾರಣಿಗಳ ಸಂಖ್ಯೆಗಳಿಗೇನು ಕಡಿಮೆ ಇಲ್ಲ. ಇದೂ ಅಲ್ಲದೆ, ಪ್ರಜಾಪ್ರತಿನಿಧಿಗಳ ಸ್ಥಾನಗಳ ಪಾವಿತ್ರ್ಯ ಕಳೆಯುವಂತೆ ಅನೇಕ ಪ್ರತಿನಿಧಿಗಳು ಸರಕಾರದಿಂದ ಆಗಬೇಕಾದ ಕೆಲಸ ಗಳಿಗೆ ಮಾಡಿಸಿಕೊಳ್ಳುವಂಥವರ ಮಧ್ಯಸ್ಥಿಕೆ ವಹಿಸಿ, ದಳ್ಳಾಳಿ ಪಡೆದು ಕೊಳ್ಳುವ ಉದಾಹರಣೆಗಳಿಗೇನೂ ಕೊರತೆ ಇಲ್ಲ. ಸಮಾಜದಲ್ಲಿಯ ಸ್ಥಾನ-ಮಾನದೊಡನೆ ಲಾಭದಾಯಕವೂ ಆಗುವಂತಾಗಿರುವ ಈ ಸ್ಥಾನ

ಗಳನ್ನು ವ್ಯಾಪಾರೀ ಸ್ಪರ್ಧೆಯಂತೆ ಸ್ಪರ್ಧಿಸಲಾಗುತ್ತದೆ. ಇದರಿಂದಾಗಿ ಅಭ್ಯರ್ಥಿಗಳ ಆರ್ಥಿಕ ಸ್ಥಿತಿಯನ್ನು ಪರಿಶೀಲಿಸುವ ಅವಶ್ಯಕತೆ ಇದೆ. ಇದಷ್ಟೇ ಅಲ್ಲ, ಪ್ರತಿಷ್ಠೆಯ ಸ್ಥಾನಗಳಿಗೆ ಸ್ಪರ್ಧೆ ನಡೆದಾಗ ಹಣ ಎಷ್ಟು ಖರ್ಚಾದೀತು ಎಂಬ ಪ್ರಶ್ನೆಗಿಂತ ಎಷ್ಟು ಹಣವಾದರೂ ಖರ್ಚಾಗಲಿ, ಗೆಲ್ಲಲೇಬೇಕೆಂಬ ಅಂಶ ಮುಖ್ಯವಾಗಿರುತ್ತದೆ. ಇದಲ್ಲದೆ, ನಮ್ಮ ಚುನಾವಣೆಗಳ ರೀತಿಯಲ್ಲಿ ಹಣ ಖರ್ಚಾಗುವ ಅನಿವಾರ್ಯ ಪ್ರಸಂಗ ಗಳಿವೆ. ಚುನಾವಣೆಯಲ್ಲಿಯ ಅತ್ಯಾಚಾರ–ಲಂಚಗಳಿಗೆ ಕೈ ಹಾಕದಿದ್ದರೂ ಪ್ರಚಾರ,ಚುನಾವಣೆಯ ದಿನ ಪೋಲಿಂಗ ಏಜಂಟ ಮುಂತಾದವರ ನೇಮಕ ಹಾಗೂ ಇತರ ಖರ್ಚಿಗೆಂದೇ ಸಾಕಷ್ಟು ಹಣ ಖರ್ಚು ಮಾಡಬೇಕಾಗುತ್ತದೆ. ಇದಲ್ಲದೇ ಕೆಲವು ಗುಂಪುಗಳ ಹೊಟಿಗಾಗಿ ಹಣ ಖರ್ಚುಮಾಡದೇ ವಿಧಿ ಇಲ್ಲ ಎಂಬ ಪ್ರಸಂಗಗಳೂ ಇರುತ್ತವೆ. ಇದರಿಂದಾಗಿ ಚುನಾವಣೆಗೆ ಹಣವಿಲ್ಲದೆ, ಹಣ ಖರ್ಚು ಮಾಡದೇ ಗತ್ಯಂತರವಿಲ್ಲದಂತಾಗಿದೆ.

ಈ ವಿಷಯದ ಬಗ್ಗೆ ವಿವೇಚಿಸುವಾಗ ಒಂದು ವಿಷಯ ನೆನಪಿ ನಲ್ಲಿಡಬೇಕು. ಚುನಾವಣೆಗೆ ಹಣ ಅನಿವಾರ್ಯವಾದರೂ ಹಣವಂತನೇ ಚುನಾವಣೆಗೆ ನಿಲ್ಲುತ್ತಾನೆಂದಲ್ಲ. ಅಲ್ಲದೆ, ಹಣವಂತನೇ ಚುನಾವಣೆಯಲ್ಲಿ ಗೆಲ್ಲುತ್ತಾನೆ ಎಂದು ಹೇಳಲೂಬಾರದು. ಏಕೆಂದರೆ, ಅಭ್ಯರ್ಥಿಯ ಗ್ರಹ ಬಲದಿಂದ ಅವನಿಗೆ ಹಣ ದೊರೆಯಬಹುದು. ಎಷ್ಟೋ ಸಲ ಅಭ್ಯರ್ಥಿಯ ಹಿತೈಷಿಗಳು ಹಣ ಸಂಗ್ರಹಿಸಿಕೊಡಬಹುದು. ಪಕ್ಷವು ಅಭ್ಯರ್ಥಿಗೆ ಹಣದ ಸಹಾಯ ಮಾಡಬಹುದು. ಅಥವಾ ಹಣವಂತರು ಹಣ ಖರ್ಚು ಮಾಡಿ, ಯೋಗ್ಯ ಅಭ್ಯರ್ಥಿಗಳನ್ನು ನಿಲ್ಲಿಸಬಹುದು. ಆದುದರಿಂದ, ಅಭ್ಯರ್ಥಿ ಹಾಗೂ ಆರ್ಥಿಕ ಸ್ಥಿತಿ ಇವುಗಳಿಗೆ ಅನ್ಯೋನ್ಯ ಸಂಬಂಧವಿದೆ ಎಂಬುದಕ್ಕೆ ಈ ಸಲದ ನಡುಗಾಲ್ಕಿಚುನಾವಣೆ ನಡೆದಾಗ ಚುನಾವಣಾ ಆಯೋಗವು ಅಭ್ಯರ್ಥಿಗಳು ಚುನಾವಣೆಗೆಂದು ಖರ್ಚು ಮಾಡಬಹುದಾದ ಪರಮಾವಧಿ ಪರಿಮಿತಿಯನ್ನು ಹತ್ತು (೧೦) ಸಾವಿರ ರೂಪಾಯಿಯಿಂದ ಹೆಚ್ಚಿಸಿದೆ. ಲೋಕ ಸಭೆಯ ಚುನಾವಣೆಗೆ (೨೫) ಇಪ್ಪತ್ತೈದು ಸಾವಿರ ರೂಪಾಯಿ ಇದ್ದದ್ದನ್ನು (೩೫) ಮೂವತ್ತೈದು ಸಾವಿರ ರೂಪಾಯಿಗಳಿಗೆ ಹೆಚ್ಚಿಸಿರುವದನ್ನು ಗಮನಿಸಿದಾಗ, ಚುನಾವಣೆಯ ಮಂಡಳಿಯೂ ಕೂಡ

ಚುನಾವಣೆಯಲ್ಲಿ ಹೆಚ್ಚು ಹಣ ಖರ್ಚು ಮಾಡಬೇಕೆಂದು ಒಪ್ಪಿಕೊಂಡಂತಾಗಿದೆ. ಆದ್ದರಿಂದ ಚುನಾವಣೆಗೂ ಅಭ್ಯರ್ಥಿಯ ಆರ್ಥಿಕ ಸ್ಥಿತಿಗೂ ಯಾವ ಬಗೆಯ ಸಂಬಂಧವಿದೆಯೆಂದು ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲೆ ಪರಿಶೀಲಿಸುವದು ಅವಶ್ಯವಿದೆ.

ಈ ವಿಷಯದ ಬಗ್ಗೆ ವಿವೇಚಿಸುವಾಗ ನಾವು ಎರಡು ಸಂಗತಿಗಳನ್ನು ಲಕ್ಷದಲ್ಲಿಡಬೇಕಾಗುತ್ತದೆ. (೧) ಅಭ್ಯರ್ಥಿಯ ಮೂಲ ಜಾತಕದಲ್ಲಿಯ ಗ್ರಹಯೋಗ (೨) ಚುನಾವಣಾ ಸಮಯದಲ್ಲಿರುವ ಅನುಕೂಲ ಕಾಲ. ಈ ಎರಡು ಸಂಗತಿಗಳು ಪೂರಕ, ಪೋಷಕವಿದ್ದ ಅಭ್ಯರ್ಥಿಗೆ ಆರ್ಥಿಕ ಸಮಸ್ಯೆ ಉಂಟಾಗದು. ಅಭ್ಯರ್ಥಿಯ ಮೂಲ ಜಾತಕದಲ್ಲಿ ಈ ಕೆಳಗೆ ಕಾಣಿಸಿದ ಯೋಗಗಳಿದ್ದರೆ, ಅಂಥ ಅಭ್ಯರ್ಥಿಗೆ ಆರ್ಥಿಕ ಸಮಸ್ಯೆ ಉಂಟಾಗದು.

೧) ವೃಷಭ – ಮಕರ ಲಗ್ನಗಳಿದ್ದು, ಬುಧ, ಶನಿಯರು ಬಲಾಢ್ಯರಿದ್ದರೆ ಇಂಥ ಅಭ್ಯರ್ಥಿಗೆ ಚುನಾವಣೆಯಲ್ಲಿ ಆರ್ಥಿಕ ಸಮಸ್ಯೆ ಉಂಟಾಗದು.

೨) ಮೇಷ, ಸಿಂಹ, ಧನು, ಈ ಲಗ್ನಗಳಿದ್ದು, ರವಿ, ಮಂಗಳ, ಗುರುಗಳು ಬಲಾಢ್ಯರಿದ್ದರೆ, ಜಾತಕನಿಗೆ ಚುನಾವಣೆಯಲ್ಲಿ ಹಣಕಾಸಿನ ಕೊರತೆ ಉಂಟಾಗುವದಿಲ್ಲ.

೩) ಕರ್ಕ, ವೃಶ್ಚಿಕ, ಲಗ್ನಗಳಿದ್ದು, ರವಿ, ಮಂಗಳ, ಚಂದ್ರ, ಗುರುಗಳು ಬಲಾಢ್ಯರಿದ್ದ ಜಾತಕನಿಗೆ ಚುನಾವಣೆಯಲ್ಲಿ ಆರ್ಥಿಕ ಅಡಚಣಿ ಆಗುವದಿಲ್ಲ.

೪) ತುಲಾ, ಕುಂಭ ಲಗ್ನಗಳಿದ್ದು, ಶುಕ್ರ–ಶನಿಯರು ಬಲಾಢ್ಯರಿದ್ದ ಜಾತಕನಿಗೆ ಹಣದ ಕೊರತೆ ಆಗುವದಿಲ್ಲ.

೫) ಮಿಥುನ, ಕನ್ಯಾ, ಮೀನ, ಲಗ್ನಗಳಿದ್ದು, ಬುಧ, ಗುರುಗಳು ಬಲಾಢ್ಯರಿದ್ದ ಜಾತಕನಿಗೆ ಆರ್ಥಿಕ ಸಮಸ್ಯೆ ಉಂಟಾಗದು.

೬) ಚತುರ್ಥ ಹಾಗೂ ಭಾಗ್ಯ ಈ ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿದ್ದ ಜಾತಕನಿಗೆ ಅವರ ಪಕ್ಷದಿಂದ ಆರ್ಥಿಕ ಸಹಾಯ ಒದಗುತ್ತದೆ.

೭) ಲಗ್ನ, ಲಾಭ, ಭಾಗ್ಯ ಈ ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿರುವ ವ್ಯಕ್ತಿಗಳಿಗೆ ಅವರ ಹಿತೈಷಿಗಳೇ ಹಣ ಒದಗಿಸುವರು.

೮) ಲಗ್ನ, ಪಂಚಮ, ಭಾಗ್ಯ, ದಶಮ, ಈ ನಾಲ್ಕು ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರುವ ವ್ಯಕ್ತಿಗಳು ಸ್ವತಃ ಚುನಾವಣೆ-ಗಾಗಿ ಹಣ ಖರ್ಚು ಮಾಡಲು ಸಿದ್ಧರಿರುತ್ತಾರೆ.

೯) ದ್ವಿತೀಯ, ಚತುರ್ಥ, ದಶಮ, ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರುವ ವ್ಯಕ್ತಿಗೆ ಚುನಾವಣೆಯಲ್ಲಿ ಅವರ ಪಾಲಕರಾಗಲೀ ಮಾತಾ, ಪಿತೃಗಳಿಂದಾಗಲೀ ಹಣದ ಸಹಾಯ ಒದಗುತ್ತದೆ.

೧೦) ಪ್ರಾಮುಖ್ಯವಾಗಿ ಚುನಾವಣೆಯ ಕಾಲದಲ್ಲಿ ಅಭ್ಯರ್ಥಿಗೆ ಗೋಚರಿ ಗ್ರಹಗಳ ಅನುಕೂಲವಿದ್ದರೆ, ಯಾವುದೇ ಪ್ರಕಾರವಾಗಿ ಹಣ ಲಭ್ಯವಾಗುತ್ತದೆ.

**(೭) ಹಿಂದಿನ ಸಾಧನೆ ಹಾಗೂ ಸ್ಥಳೀಯ-ರಾಷ್ಟ್ರೀಯ ಸಮಸ್ಯೆಗಳ ಪರಿಣಾಮ.**

ಚುನಾವಣೆಯಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ಹಿಂದಿನ ಸಾಧನೆಯ ಅಂಶವನ್ನು ಪರಿಶೀಲಿಸಬೇಕಾಗುತ್ತದೆ. ಯಾವದೇ ವಿಶಿಷ್ಟ ಕ್ಷೇತ್ರದಲ್ಲಿ ಪ್ರತಿಷ್ಠೆಗಳಿಸಿರುವ ವ್ಯಕ್ತಿಯಾಗಲಿ, ಸಮಾಜ ಸೇವೆ, ರಾಜಕೀಯ ಕ್ಷೇತ್ರದಲ್ಲಿ ಬಹಳ ದಿನದಿಂದಿರುವ ವ್ಯಕ್ತಿಯಾಗಲಿ, ಯಾವದೊಂದು ಸರಕಾರದ ಅಧಿಕಾರ ಸ್ಥಾನದಲ್ಲಿದ್ದು, ನಿವೃತರಾದವರಾಗಲಿ, ಸಾಹಿತ್ಯ ಕ್ಷೇತ್ರದಲ್ಲಿಯ ಸೇವೆ ಮಾಡಿದ ಸ್ಥಾನಿಕಸಂಸ್ಥೆಗಳಲ್ಲಿ ಸೇವೆಗೈದ ವ್ಯಕ್ತಿಯಾಗಲೀ ವಿವಿಧ ಸಂಘ-ಸಂಸ್ಥೆ ಯುನಿಯನ್-ಟ್ರೇಡ್‌ಯುನಿಯನ್ನಿನ ಪದಾಧಿಕಾರಿಗಳಾಗಿ ಸೇವೆಗೈದ ವ್ಯಕ್ತಿಗಳು ಮುಂತಾದ ಹಿನ್ನೆಲೆಯಿದ್ದವರಿಗೆ ಚುನಾವಣೆಯಲ್ಲಿ

ಅನುಕೂಲವಾಗುವ ಲಕ್ಷಣಗಳಿರುತ್ತವೆ. ಏಕೆಂದರೆ ಅವರಿಗೆ ಅಷ್ಟರಮಟ್ಟಿಗಾದರೂ ಜನರ ಸಂಪರ್ಕ ಬಂದಿರುತ್ತದೆ. ಯಾವ ಕ್ಷೇತ್ರದಲ್ಲಿಯೂ ಹೆಸರು ಪಡೆಯದ ರಾಜಕೀಯದಲ್ಲಿ ಹೊಸಬರಾದವರಿಗಿಂತ ಈ ಪ್ರತಿಷ್ಠರು ಅನಕೂಲ ಹೊಂದಿದವರಿರುತ್ತಾರೆ

ಇದೇ ರೀತಿ ಇನ್ನೊಂದು ಮುಖ್ಯ ವಿಷಯವೆಂದರೆ, ಅಭ್ಯರ್ಥಿಯು ಸ್ಥಳೀಯ ಸಮಸ್ಯೆಗಳನ್ನು ಆಧರಿಸಿ ಚುನಾವಣೆಯಲ್ಲಿ ಹೋರಾಡಿದರೆ ಗೆಲ್ಲಬಲ್ಲನೇ, ? ರಾಷ್ಟ್ರೀಯ ಸಮಸ್ಯೆಗಳನ್ನು ಆಧರಿಸಿ ಚುನಾವಣೆಗೆ ಸ್ಪರ್ಧಿಸಿದರೆ ಯಶಸ್ಸು ಸಿಗಬಲ್ಲದೇ? ಎಂಬುದನ್ನು ಕೂಡ ಅಭ್ಯರ್ಥಿಯ ಜಾತಕದ ಮೇಲಿಂದ ಹೇಳಬಹುದು. ಜಯಾ-ಪಜಯಗಳನ್ನು ನಿರ್ಧರಿಸಬೇಕಾದರೆ ಈ ಅಂಶಗಳನ್ನು ಪರಿಶೀಲಿಸಬೇಕಾಗುತ್ತದೆ. ಆದರೆ, ಜ್ಯೋತಿಷ್ಯ ಶಾಸ್ತ್ರದ ದೃಷ್ಟಿಯಿಂದ ಈ ವಿಷಯವನ್ನು ನಿರ್ಧರಿಸುವ ಅಳತೆಗೋಲೇ ಬೇರೆ. ಏಕೆಂದರೆ ಪ್ರತಿಷ್ಠಿತರು ಸೋಲುವದಾಗಲೀ, ಅಪರಿಚಿತರು ಗೆಲ್ಲುವದಾಗಲೀ ಹೊಸವೇನೂ ಅಲ್ಲ. ಸ್ಥಳೀಯ ಸಮಸ್ಯೆಗಳಿದ್ದಾಗ್ಯೂ ಸ್ಥಳೀಯ ಸಮಸ್ಯೆಗಳನ್ನು ಎದುರಿಸಿ ಗೆಲ್ಲುವವರನ್ನು ಕಾಣುತ್ತೇವೆ. ಇವುಗಳ ವಿವರಣೆಯನ್ನು ಜ್ಯೋತಿಷ್ಯಶಾಸ್ತ್ರದ ದೃಷ್ಟಿಯಿಂದ ಈ ಕೆಳಗಿನಂತೆ ವಿವರಿಸಲಾಗಿದೆ.

ಹಿಂದಿನ ಸಾಧನೆಯಿಂದ ಸ್ಪರ್ಧಿಸುವ ಅಭ್ಯರ್ಥಿಗಳ ಜಾತಕದಲ್ಲಿ ಈ ಕೆಳಗಿನ ಯೋಗಗಳಿರುವದು ಕಂಡು ಬರುತ್ತದೆ.

೧) ಇವರ ಜಾತಕದಲ್ಲಿ ರವಿಯು ಬಲಾಢ್ಯನಿರುತ್ತಾನೆ, ಅಥವಾ ಯೋಗಕಾರಕ ನಿರುತ್ತಾನ.

೨) ಇಂಥವರು ಹೆಚ್ಚಾಗಿ ಮಾರ್ಚ ೧೫ ರಿಂದ ಮೇ ೧೫ ರ ವರೆಗೆ ಅಥವಾ ನವ್ಹಂಬರ ೧೪ ರಿಂದ ಜನೆವರಿ ೧೪ ರ ವರೆಗೆ ಇಲ್ಲವೆ ಜುಲೈ ೧೫ ರಿಂದ ಸಪ್ಟಂಬರ ೧೬ರ ವರೆಗೆ ಜನಿಸಿದವರಿರುತ್ತಾರೆ.

೩) ಇವರು ಹೆಚ್ಚಾಗಿ ಮಿಥುನ, ಕರ್ಕ, ಸಿಂಹ, ತುಲಾ, ಮಕರ, ಕುಂಭ, ಮೀನ ಈ ರಾಶಿಯವರಿರುತ್ತಾರೆ.

೪) ಇವರ ಜಾತಕದಲ್ಲಿ ಐದು ಗ್ರಹಗಳು ಸ್ವಕ್ಷೇತ್ರದಲ್ಲಿರುತ್ತವೆ. ಅಥವಾ ಮೂರು ಉಚ್ಚಕ್ಷೇತ್ರ, ಹಾಗೂ ಎರಡು ಸ್ವಕ್ಷೇತ್ರದಲ್ಲಿರುತ್ತವೆ.

೫) ಇಂಥವರು ಹೆಚ್ಚಾಗಿ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ, ಈ ಲಗ್ನದವರಿರುತ್ತಾರೆ.

೬) ಲಗ್ನ-ಲಗ್ನೇಶ, ಪಂಚಮ-ಪಂಚಮೇಶ, ದ್ವಿತೀಯ-ದ್ವಿತಿಯೇಶರು ಬಲಾಢ್ಯರಿರುತ್ತಾರೆ.

ಈ ಕೆಳಗೆ ಕಾಣಿಸಿದ ಯೋಗಗಳಲ್ಲಿ ಜನಿಸಿದವರಿಗೆ ಸ್ಥಳೀಯ, ರಾಷ್ಟ್ರೀಯ ಸಮಸ್ಯೆಗಳ ಬಲಾಬಲಗಳನ್ನು ಕೊಡಲಾಗಿದೆ.

೧) ಆಯಾ ಲಗ್ನದ ಯೋಗಕಾರಕ ಗ್ರಹಗಳು ಬಲಾಢ್ಯರಿದ್ದ ವ್ಯಕ್ತಿಗೆ ಸ್ಥಳೀಯ ಇಲ್ಲವೇ ರಾಷ್ಟ್ರೀಯ ಸಮಸ್ಯೆಗಳಿಂದ ಚುನಾವಣೆಯಲ್ಲಿ ಆತಂಕ ಬರುವದಿಲ್ಲ.

೨) ಯಾರ ಜಾತಕದಲ್ಲಿ ಶನಿ-ಚಂದ್ರ, ರಾಹು-ಚಂದ್ರಗಳ ಯುತಿಯಾಗಲೀ ಶನಿಯಿಂದ ದೃಷ್ಟಿಸಲ್ಪಟ್ಟ ಚಂದ್ರನಾಗಲೀ ಇದ್ದರೆ, ಚುನಾವಣೆ ಸಮಯದಲ್ಲಿ ಸ್ಥಳೀಯ ಸಮಸ್ಯೆಗಳನ್ನು (Local Problems.) ಎದುರಿಸಬೇಕಾಗುತ್ತದೆ.

೩) ಅನೇಕ ಗ್ರಹಗಳು ಚತುರ್ಥದಲ್ಲಿದ್ದರೆ, ಅಥವಾ ಚತುರ್ಥೇಶ ನಿರ್ಬಲನಿದ್ದ ವ್ಯಕ್ತಿಗಳಿಗೆ ಚುನಾವಣೆಯ ಸಮಯದಲ್ಲಿ ಸ್ಥಳೀಯ ಸಮಸ್ಯೆಗಳನ್ನು ಎದುರಿಸ ಬೇಕಾಗುತ್ತದೆ.

೪) ರವಿ-ಶನಿ, ಶನಿ-ಮಂಗಳ, ರವಿ-ಕೇತು, ಚಂದ್ರ-ರಾಹು, ಈ ಗ್ರಹಗಳ ಯುತಿಯೋಗವಾಗಲೀ ಪ್ರತಿಯೋಗವಾಗಲಿ ಲಗ್ನ-ಸಪ್ತಮ, ಚತುರ್ಥ-ದಶಮ ಸ್ಥಾನಗಳಲ್ಲಿದ್ದರೆ, ಇಂಥ ವ್ಯಕ್ತಿಗಳಿಗೆ ಚುನಾವಣೆ ಸಮಯದಲ್ಲಿ ಸ್ಥಳೀಯ ಸಮಸ್ಯೆಗಳು ಭೂತಾಕಾರವಾಗಿ ಬೆಳೆದಿರುತ್ತವೆ.

೫) ರವಿಯು ನಿರ್ಬಲನಿರುವ ವ್ಯಕ್ತಿಗಳಿಗೆ ಸ್ಥಳೀಯ ಸಮಸ್ಯೆಗಳಿಂದ ತೊಂದರೆ ಉಂಟಾಗುತ್ತದೆ.

೬) ಚುನಾವಣೆ ನಡೆಯುವ ಕಾಲದಲ್ಲಿ ಪಂಚಮಾಷ್ಟಮ ಶನಿ ಅಥವಾ ಸಾಡೇಸಾತಿ ಇದ್ದರೆ, ಇಲ್ಲವೇ ಗುರುವು ಗೋಚರಿಯಿಂದ ನಾಲ್ಕು ಎಂಟು, ಹನ್ನೆರಡನೇಯವನಾಗಿದ್ದರೆ ಸ್ಥಳೀಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

೭) ಲಗ್ನೇಶ, ಚತುರ್ಥೇಶ, ಚಂದ್ರ ಈ ಮೂರರಲ್ಲಿ ಯಾವುದೇ ಎರಡು ಸಂಗತಿಗಳು ನಿರ್ಬಲವಿದ್ದ ಜಾತಕನಿಗೆ ಸ್ಥಳೀಯ ಸಮಸ್ಯೆಗಳನ್ನು ಎದುರಿಸಬೇಕಾಗುವದು.



೨

# ಚುನಾವಣೆಗಳಲ್ಲಿಯ ಪ್ರಕಾರಗಳು

ಭಾರತವು ಪ್ರಜಾಪ್ರಭುತ್ವದ ತಳಹದಿಯ ಮೇಲೆ ತನ್ನ ಆಗು-ಹೋಗುಗಳನ್ನು ನಡೆಸುತ್ತಿದೆ. ಪ್ರಜಾಪ್ರಭುತ್ವ ಭಾರತೀಯರ ಜೀವನ ಮಾರ್ಗವಾಗಿ ಪರಿಣಮಿಸುವಂತೆ ರಾಷ್ಟ್ರದ ವ್ಯವಹಾರ ನಡೆಯುತ್ತದೆ. ಚುನಾವಣೆಯು ಪ್ರಜಾಪ್ರಭುತ್ವದ ಮೂಲಾಧಾರ ಅಥವಾ ಕಾರ್ಯ ಪದ್ಧತಿಯಾದ್ದರಿಂದ ನಾವು ಆಡಳಿತ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಚುನಾವಣೆಗಳನ್ನು ವೀಕ್ಷಿಸುತ್ತೇವೆ. ಹಳ್ಳಿಯಲ್ಲಿಯ ಪಂಚಾಯಿತಿಯ ಕಾರ್ಯಾಚರಣೆಗೆ ಬೇಕಾದ ಅಧಿಕಾರಿಗಳ ಆಯ್ಕೆಯೇ ಆಗಲಿ, ರಾಷ್ಟ್ರದ ಆಗು-ಹೋಗುಗಳನ್ನು ನಿರ್ಧರಿಸುವ, ಕಾಯ್ದೆಯನ್ನು ಮಾಡುವ ಸಂಸತ್ಸದಸ್ಯರ ಆಯ್ಕೆಯಾಗಲಿ ಚುನಾವಣೆಯ ಮೂಲಕವೇ ನಡೆ-ಯುತ್ತದೆ. ಆದುದರಿಂದ ಈ ಪ್ರಕರಣದಲ್ಲಿ ಚುನಾವಣೆಯ ಪ್ರಕಾರಗಳ ಬಗ್ಗೆ ವೀಕ್ಷಣೆ ಮಾಡಲಾಗಿದೆ.

**ಚುನಾವಣೆಯಲ್ಲಿಯ ವೈವಿಧ್ಯತೆ :**—ಯಾವದೇ ಪ್ರಕಾರದ ಚುನಾವಣೆ ಇರಲಿ, ಅಥವಾ ಆಯ್ಕೆಯಾಗಿರಲಿ, ಸಾಮಾನ್ಯವಾಗಿ ನಾವು ಎರಡು ರೀತಿಯಿಂದ ವಿಂಗಡಿಸಬಹುದು. ೧) ನೇರ ಚುನಾವಣೆಗಳು (Direct Elections) ೨) ಅಪ್ರತ್ಯಕ್ಷ ಚುನಾವಣೆಗಳು (Indirect Election). ನೇರ ಚುನಾವಣೆಯಲ್ಲಿ ಆಯಾ ಮತದಾರ ಕ್ಷೇತ್ರಕ್ಕೆ ಸಂಬಂಧಿಸಿದ ಎಲ್ಲ ಮತದಾರರೂ ನಿರ್ದಿಷ್ಟಗೊಳಿಸಿದಷ್ಟು ಅಭ್ಯರ್ಥಿಗಳನ್ನು ಆಯ್ಕೆ ಮಾಡುತ್ತಾರೆ. ಉದಾ :-ವಿಧಾನಸಭಾ ಸದಸ್ಯರ ಚುನಾವಣೆ, ಪಂಚಾಯತಿ, ಮುನಿಸಿಪಲ್ ಬರೋ, ಕಾರ್ಪೋರೇಶನ್, ನಗರಪಾಲಿಕಾ, ಜಿಲ್ಹಾ ಪರಿಷತ್ ಲೋಕಸಭಾ ಸದಸ್ಯರ, ಇವೇ ಮೊದಲಾದ ಚುನಾವಣೆಗಳು. ಇನ್ನು ಅಪ್ರತ್ಯಕ್ಷ ಚುನಾವಣೆಯಲ್ಲಿ ಚುನಾಯಿತ ಸದಸ್ಯರನೇಕರು,

ಒಂದು ಮತದಾರ ಸಂಘವಾಗಿ ಪರಿವರ್ತಿಸಲಾಗಿ (Electroal College) ಆ ಸಂಘದಿಂದ ನಿರ್ದಿಷ್ಟಗೊಳಿಸಿದಷ್ಟು ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ. ಉದಾ :—ವಿಧಾನ ಸಭಾ ಸದಸ್ಯರು ಮತದಾರ ಸಂಘವಾಗಿ ರೂಪಗೊಂಡು ಕೆಲ ವಿಧಾನ ಪರಿಷತ್ತಿನ ಸದಸ್ಯರನ್ನು ಆಯ್ಕೆ ಮಾಡುವಿಕೆ. ಈ ಎರಡು ಪ್ರಕಾರದ ಚುನಾವಣೆಗಳಲ್ಲಿ ಯಶಸ್ಸು ಪಡೆಯಲು ಜಾತಕದಲ್ಲಿರಬೇಕಾದ ಯೋಗಗಳಾವವು ? ಎಂಬುವನ್ನು ವಿವೇಚಿಸುವಾ.

೧) ನೇರ ಚುನಾವಣೆಯ ಸ್ಪರ್ಧೆಯಲ್ಲಿ ಯಶಸ್ಸು ಪಡೆಯಲು ಜಾತಕದಲ್ಲಿ ಅನೇಕ ಗ್ರಹಗಳು ರಾಶಿ ಬಲದವ ವಿರುತ್ತವೆ.ಆದರೆ ಅಪ್ರತ್ಯಕ್ಷ ರೀತಿಯ ಚುನಾವಣೆಯಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ಜಾತಕದಲ್ಲಿ ಗ್ರಹಗಳು ರಾಶಿ ಬಲದವರಿಗಿಂತ ಸ್ಥಾನ ಬಲದವರೂ ಯೋಗಕಾರಕವೂ ಇರುತ್ತವೆ.

೨) ನೇರ ಚುನಾವಣೆಯಲ್ಲಿ ಸ್ಪರ್ಧಿಸಲು ಲಗ್ನ, ತೃತೀಯ, ದ್ವಿತೀಯ, ದಶಮ ಈ ಸ್ಥಾನಗಳು ಪೂರಕವಿದ್ದರೆ ಅಪ್ರತ್ಯಕ್ಷ ಚುನಾವಣೆ-ಯಲ್ಲಿ ಸ್ಪರ್ಧಿಸಲು ಚತುರ್ಥ, ಪಂಚಮ, ಭಾಗ್ಯ ಈ ಸ್ಥಾನಗಳು ಪೂರಕ ವಿರುತ್ತವೆ.

೩) ಮೇಷ, ವೃಷಭ, ಕನ್ಯಾ,ವೃಶ್ಚಿಕ, ಮಕರ, ಸಿಂಹ, ಧನು, ಕುಂಭ ಈ ರಾಶಿಯ ಜನರು ನೇರ ಚುನಾವಣೆಯಲ್ಲಿ ಯಶಸ್ಸು ಗಳಿಸಿದರೆ, ಮಿಥುನ, ತುಲಾ, ಕುಂಭ, ಕರ್ಕ, ಮೀನ ಈ ರಾಶಿಯ ಜನರು ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸು ಪಡೆಯುತ್ತಾರೆ.

೪) ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರು ನೇರ ಚುನಾವಣೆಯ ಸ್ಪರ್ಧೆಯಲ್ಲಿ ಯಶಸ್ಸು ಗಳಿಸಿದರೆ ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ತುಲಾ, ಧನು, ಮಕರ, ಕುಂಭ ಈ ಲಗ್ನದವರು ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸು ಗಳಿಸುತ್ತಾರೆ.

೫) ಅನೇಕ ಗ್ರಹಗಳು ಅಗ್ನಿ ಇಲ್ಲವೇ ಭೂರಾಶಿಯಲ್ಲಿ ಇದ್ದ, ಅಭ್ಯರ್ಥಿಗಳು ನೇರ ಚುನಾವಣೆಯ ಸ್ಪರ್ಧೆಯಲ್ಲಿ ಯಶಸ್ಸು ಪಡೆವರೆ, ವಾಯು ಇಲ್ಲವೇ ಜಲರಾಶಿಯಲ್ಲಿ ಅನೇಕ ಗ್ರಹಗಳು ಬಲಾಢ್ಯವಾಗಿದ್ದರೆ, ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸು ಪಡೆಯುತ್ತಾರೆ.

(೬) ರವಿ-ಶನಿ-ಮಂಗಳರು ಬಲಾಢ್ಯರಿದ್ದ ವ್ಯಕ್ತಿಗಳು ನೇರವಾದ ಚುನಾವಣೆಯಲ್ಲಿ ಯಶಸ್ಸುಗಳಿಸಿದರೆ, ರವಿ, ಬುಧ, ಗುರು, ಚಂದ್ರ ಶುಕ್ರರು ಬಲಾಢ್ಯರಿದ್ದ ವ್ಯಕ್ತಿಗಳು ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸು ಪಡೆಯುತ್ತಾರೆ.

(೭) ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಗೋಚರಿ ಗ್ರಹಗಳು ಅನುಕೂಲವಿರಲೇಬೇಕು. ಅದರಲ್ಲಿಯೂ ಗುರು, ಶನಿ, ರವಿ, ಚಂದ್ರರು ಅನುಕೂಲವಿರಬೇಕು. ಆದರೆ ನೇರ ಚುನಾವಣೆಯಲ್ಲಿ ಯಶ ಪಡೆಯಲು ಗೋಚರಿ ಗ್ರಹಗಳು ಕಡಿಮೆ ಅನುಕೂಲವಿದ್ದರು ಪ್ರಯಾಸ ದಿಂದಾದರೂ ಯಶ ಸಾಧ್ಯವಿದೆ ಉದಾ:–ಪಂಚಮಾಷ್ಟಮ ಶನಿ,ಸಾಡೇಸಾತಿ, ಇದ್ದರೂ ನೇರ ಚುನಾವಣೆಯಲ್ಲಿ ತುರಿಸಿನಿಂದಾಗಲೀ ಅಲ್ಪ ಮತದಿಂದಾ ಗಲೀ ಯಶಸ್ಸು ಪಡೆಯಬಹುದಾಗಿದೆ. ಆದರೆ ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಪಡೆಯಲು ಗೋಚರೀ ಗ್ರಹಗಳ ಸಂಪೂರ್ಣ ಬಲ ಬೇಕಾಗುವದು. ಅದರಲ್ಲಿಯೂ ಚುನಾವಣೆ ನಡೆಯುವ ದಿನ ಗುರು, ಚಂದ್ರ, ರವಿಯರು ಅನುಕೂಲವಿರಲೇಬೇಕು. ಹಾಗೂ ಪಂಚಮಾಷ್ಟಮ ಶನಿ, ಸಾಡೇಸಾತಿ ಇರಕೂಡದು.

೮) ನೇರ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಯೋಗಕಾರಕ ಗ್ರಹಗಳ, ಮಹರ್ದಶ ಅಥವಾ ಬಲಾಢ್ಯ ಗ್ರಹಗಳ ಮಹರ್ದಶ ಇದ್ದರೆ ಸಾಕಾದೀತು ಆದರೆ ಅಪ್ರತ್ಯಕ್ಷ ಚುನಾವಣೆಯಲ್ಲಿ ಯೋಗಕಾರಕ ಗ್ರಹಗಳು ಇಲ್ಲವೇ ಜಾತಕದ ಬಲಾಢ್ಯ ಗ್ರಹಗಳ ಮಹರ್ದಸೆಗಳ ಜೊತೆಗೆ ಅಂತರ್ದಸೆ ಗಳೂ ಪೂರಕವೂ ಪೋಷಕವೂ ಇರಬೇಕು.

೯) ನೇರ ಚುನಾವಣೆಯಲ್ಲಿ ಸ್ಪರ್ಧಿಸಲು ಜಾತಕದಲ್ಲಿ ಅನೇಕ ಗ್ರಹಗಳು ಸ್ವಕ್ಷೇತ್ರದಲ್ಲಿದ್ದರೆ ಸಾಕಾದೀತು. ಆದರೆ ಅಪ್ರತ್ಯಕ್ಷ ಚುನಾವಣೆ ಯಲ್ಲಿ ಕೆಲ ಗ್ರಹಗಳಾದರೂ ಉಚ್ಛ ರಾಶಿಯವರಿರಬೇಕು.

೧೦) ನೇರ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಅನೇಕ ಗ್ರಹಗಳು ಸ್ವಕ್ಷೇತ್ರ, ಉಚ್ಚ ರಾಶಿ ಮಿತ್ರ ಕ್ಷೇತ್ರಿಯವರಿದ್ದು, ಅಸ್ತ, ವಕ್ರಿ, ವೃದ್ಧಾಪ್ಯ, ಬಾಲಾವಸ್ಥೆ ಇದ್ದರೂ ನಡೆದೀತು. ಆದರೆ ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಗ್ರಹಗಳು ಅಸ್ತ, ವಕ್ರಿ, ವೃದ್ಧಾಪ್ಯ ಮೊದಲಾಗಿ ಇರಕೂಡದು.

೧೧) ನೇರ ಚುನಾವಣೆಯಲ್ಲಿ ಯಶಪಡೆಯಲು, ಜಾತಕದ ಲಗ್ನ-ಲಗ್ನೇಶ ದಶಮ-ದಶಮೇಶ ಬಲಾಢ್ಯರಿದ್ದು, ಗೋಚರಿ ಗ್ರಹಗಳು ಅನುಕೂಲರಿದ್ದರೆ ಯಶಸ್ಸು ಲಭಿಸುತ್ತದೆ. ಆದರೆ, ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಚತುರ್ಥ-ಚತುರ್ಥೇಶ, ಭಾಗ್ಯ-ಭಾಗ್ಯೇಶರು ಜಾತಕದಲ್ಲಿ ಬಲಾಢ್ಯರಿದ್ದು, ಗೋಚರೀ ಗ್ರಹಗಳು ಅನುಕೂಲವಿರಬೇಕಾಗುತ್ತದೆ.

೧೨) ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಗ್ರಹಗಳು ಜಾತಕದಲ್ಲಿ ತ್ರಿಕೋನ ಸ್ಥಾನಗಳು ಬಲಾಢ್ಯವಿರುತ್ತವೆ. ಆದರೆ, ನೇರ ಚುನಾವಣೆಯಲ್ಲಿ ಯಶಸ್ಸು ಪಡೆಯುವ ಅಭ್ಯರ್ಥಿಯ ಜಾತಕದಲ್ಲಿ ಕೇಂದ್ರ ಸ್ಥಾನಗಳು ಬಲಾಢ್ಯವಿರುತ್ತವೆ.

ಮೇಲೆ ಬರೆದ ಈ ಹನ್ನೆರಡು ಸಂಗತಿಗಳ ಬಲಾಬಲದ ಮೇಲಿಂದ ನೇರ-ಅಪ್ರತ್ಯಕ್ಷ ಚುನಾವಣೆಗಳ ಜಯಾ-ಅಪಜಯಗಳನ್ನು ನಿರ್ಧರಿಸಬೇಕು.

**ಚುನಾವಣೆಗಳಲ್ಲಿಯ ಪ್ರಕಾರಗಳು :**

ಯಾವ ಸಂಸ್ಥೆಗಾಗಿ ಚುನಾವಣೆಗಳು ನಡೆಯುವದಿದೆಯೋ ಆ ಸಂಸ್ಥೆಯ ಮಾದರಿಯ ಮೇಲೆ ಚುನಾವಣೆಗಳ ಪ್ರಕಾರವನ್ನಾಗಿ ವಿಂಗಡಿಸಬಹುದು. ನಮ್ಮ ಅನುಭವದಲ್ಲಿ ಈ ಚುನಾವಣೆಗಳನ್ನು ಐದು ಪ್ರಕಾರಗಳನ್ನಾಗಿ ವಿಂಗಡಿಸಲಾಗಿದೆ. (೧) ರಾಜಕೀಯ ಚುನಾವಣೆಗಳು. (೨) ಸ್ಥಾನಿಕ ಹಾಗೂ ಸಹಕಾರ ಸಂಸ್ಥೆಗಳ ಚುನಾವಣೆಗಳು.

(೩) ಶೈಕ್ಷಣಿಕ ಸಂಘ - ಸಂಸ್ಥೆಗಳ ಚುನಾವಣೆಗಳು. (೪) ಸಾಂಸ್ಕೃತಿಕ - ಸಾಹಿತ್ಯಿಕ - ಧಾರ್ಮಿಕ, ವೃತ್ತಿ - ಸೇವಾ ಸಂಸ್ಥೆಗಳ ಚುನಾವಣೆಗಳು. (೫) ಕಾರ್ಮಿಕ ಸಂಘ ಸಂಸ್ಥೆಗಳ ಹಾಗೂ ಮಾಲಕರ - ಅಧಿಕಾರಿ ವರ್ಗಗಳ ಚುನಾವಣೆಗಳು. ಈ ಐದು ಪ್ರಕಾರದ ಚುನಾವಣೆಗಳಲ್ಲಿ ಸ್ಪರ್ಧಿಸಿ ಆಯ್ಕೆ ಹೊಂದಲು ಅಥವಾ ಯಶ ಪಡೆಯಲು ಜಾತಕದಲ್ಲಿ ಯಾವ ಯಾವ ಪ್ರಕಾರದ ಯೋಗಗಳು ಇರಬೇಕೆಂಬುದನ್ನು ಒಂದೊಂದಾಗಿ ವಿಶ್ಲೇಷಿಸೋಣ.

### (೧) ರಾಜಕೀಯ ಚುನಾವಣೆಗಳು :

ರಾಷ್ಟ್ರಪತಿ, ಉಪರಾಷ್ಟ್ರಪತಿ, ಸಭಾಪತಿ, ಉಪಸಭಾಪತಿ, ಪ್ರಧಾನ-ಮಂತ್ರಿ, ಮುಖ್ಯಮಂತ್ರಿ, ಲೋಕಸಭೆ, ರಾಜ್ಯಸಭೆ, ಹಾಗೂ ವಿಧಾನಸಭೆ ವಿಧಾನಪರಿಷತ್ತಿನ ಸದಸ್ಯರು. ಇವೇ ರಾಜಕೀಯ ಚುನಾವಣೆಗಳಲ್ಲಿ ಪ್ರಮುಖ ಚುನಾವಣೆಗಳಾಗಿವೆ. ಈ ರಾಜಕೀಯ ಚುನಾವಣೆಗಳನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಬಹುದು. (೧) ರಾಷ್ಟ್ರಪತಿ, ಉಪರಾಷ್ಟ್ರಪತಿ ಗಳ ಚುನಾವಣೆಗಳು ಅಪ್ರತ್ಯಕ್ಷ ಚುನಾವಣೆಗಳು ಏಕೆಂದರೆ ರಾಷ್ಟ್ರ ಪತಿಗಳ ಆಯ್ಕೆ ಮಾಡುವದು ವಿವಿಧ ರಾಜ್ಯಗಳ ವಿಧಾನ ಸಭಾ ಸದಸ್ಯರ ಹಾಗೂ ಲೋಕಸಭೆ, ರಾಜ್ಯಸಭೆಗಳ ಸದಸ್ಯರಿಂದ ಕೂಡಿದ ಮತದಾರ ಸಂಘವಾಗಿ, ಅಪ್ರತ್ಯಕ್ಷ ರೀತಿಯಿಂದ ಚುನಾವಣೆ ಜರುಗು-ತ್ತದೆ. ಇದರಂತೆಯೇ ಉಪರಾಷ್ಟ್ರಪತಿಗಳ ಆಯ್ಕೆ ಮಾಡುವದು ಕೂಡಾ ಲೋಕಸಭೆ ಹಾಗೂ ರಾಜ್ಯಸಭೆಗಳ ಸದಸ್ಯರ ಮತದಾರ ಸಂಘವಾಗಿ ಅಪ್ರತ್ಯಕ್ಷ ರೀತಿಯಿಂದಲೇ ಆಯ್ಕೆ ಯಾಗುತ್ತದೆ. ಆದರೆ ಪ್ರಧಾನ ಮಂತ್ರಿ ಹಾಗೂ ಮುಖ್ಯ ಮಂತ್ರಿಗಳ ಆಯ್ಕೆ ಬೇರೆ ರೀತಿಯಲ್ಲಿ ಯಾಗುತ್ತದೆ. ಏಕೆಂದರೆ ಲೋಕಸಭೆಯಲ್ಲಿ ಬಹುಮತ ರಾಜಕೀಯ ಪಕ್ಷದ ನಾಯಕನನ್ನು ರಾಷ್ಟ್ರಪತಿಗಳು ಪ್ರಧಾನ ಮಂತ್ರಿಯನ್ನಾಗಿ ನೇಮಿ ಸುತ್ತಾರೆ. ಇದರಂತೆಯೇ ರಾಜ್ಯದ ಮುಖ್ಯ ಮಂತ್ರಿಗಳ ಆಯ್ಕೆಯೂ ಕೂಡಾ ರಾಜ್ಯದ ವಿಧಾನಸಭೆಯಲ್ಲಿಯ ಬಹುಮತ ರಾಜಕೀಯ ಪಕ್ಷದ ನಾಯಕನನ್ನು ರಾಜ್ಯಪಾಲರು ಮುಖ್ಯ ಮಂತ್ರಿಯನ್ನಾಗಿ ನೇಮಿಸು-

ತ್ತಾರೆ. ಇವರಿಂದಾಗಿ ಲೋಕಸಭೆಯ ಬಹುಮತ ರಾಜಕೀಯ ಪಕ್ಷದ ಸದಸ್ಯರು ಹಾಗೂ ವಿಧಾನಸಭೆಯ ಬಹುಮತ ರಾಜಕೀಯ ಪಕ್ಷದ ಸದಸ್ಯರು ಮತದಾರ ಸಂಘವಾಗಿ ತಮ್ಮ ತಮ್ಮ ನಾಯಕನನ್ನಾಗಿ ಆಯ್ಕೆ ಮಾಡುತ್ತಾರೆ. ಜ್ಯೋತಿಷ್ಯ-ಶಾಸ್ತ್ರದ ಪ್ರಕಾರ ಇದೊಂದು ರೀತಿಯಿಂದ ಅಪ್ರತ್ಯಕ್ಷ ರೀತಿಯ ಚುನಾವಣೆಯಲ್ಲಿಯೇ ವಿಂಗಡಿಸ-ಬಹುದು. ಆದುದರಿಂದ ಈ ತರಹದ ಚುನಾವಣೆಯಲ್ಲಿ ಆಯ್ಕೆ ಹೊಂದಲು ಜಾತಕದಲ್ಲಿ ಅಪ್ರತ್ಯಕ್ಷ ಚುನಾವಣೆಯ ಕಾರಕ ಗ್ರಹ ಲಗ್ನ, ರಾಶಿ, ಸ್ಥಾನಗಳು, ಪೋಷಕವೂ, ಪೂರಕವೂ ಇರಬೇಕು. ಇವುಗಳ ವಿಶ್ಲೇಷಣೆಯನ್ನು ಇದೇ ಪ್ರಕರಣದ ೩೦-೩೧ನೇ ಪುಟದಲ್ಲಿ ಕೊಡಲಾಗಿದೆ.

೨) **ಲೋಕಸಭೆ ಹಾಗೂ ವಿಧಾನಸಭೆ ಸದಸ್ಯರ ಚುನಾವಣೆಗಳು :-** ಲೋಕಸಭೆ ಹಾಗೂ ವಿಧಾನಸಭೆಗಳ ಚುನಾವಣೆಯಲ್ಲಿ ಆಯ್ಕೆಯಾಗಬೇಕಾದವರೆ ಸಾರ್ವತ್ರಿಕ ಚುನಾವಣೆಯಲ್ಲಿ ಆಯ್ಕೆಯಾಗಬೇಕಾಗುತ್ತದೆ. ಆಯ್ಕೆಯು ನೇರ ಪ್ರಕಾರದ ಚುನಾವಣೆಯಲ್ಲಿ ಇರುತ್ತದೆ. ನೇರ ಪ್ರಕಾರದ ಚುನಾವಣೆಯಲ್ಲಿ ಭಾಗವಹಿಸಿ ಚುನಾಯಿತರಾಗುವ ವ್ಯಕ್ತಿಗಳ ಜಾತಕದಲ್ಲಿ ಗ್ರಹಯೋಗಗಳು ಎಂತಿರಬೇಕೆಂಬುದನ್ನು ಈ ಪ್ರಕರಣದ ೩೦-೩೧ ನೇ ಪುಟದಲ್ಲಿ ಕೊಡಲಾಗಿದೆ.

೩) **ವಿಧಾನ ಪರಿಷತ್ತು ಹಾಗೂ ರಾಜ್ಯಸಭೆ ಸದಸ್ಯರ ಚುನಾ-ವಣೆಗಳು :-** ವಿಧಾನಪರಿಷತ್ತು ಹಾಗೂ ರಾಜ್ಯಸಭೆಯ ಚುನಾವಣೆಯ ರೀತಿಯೇ ಬೇರೆ ಬೇರೆ ಇರುತ್ತವೆ. ವಿಧಾನಪರಿಷತ್ತುಗಳಿಗೆ ಆಯ್ಕೆಯು ಇದೆ, ನಾಮಕರಣವೂ ಇದೆ. ಕೆಲವರು ಪದವೀಧರರ ಮತದಾರ ಸಂಘ, ಶಿಕ್ಷಕರ ಮತದಾರ ಸಂಘ, ಸ್ಥಾನಿಕ ಸಂಸ್ಥೆಯ ಮತದಾರ ಸಂಘ, ಮುಂತಾದ ಕ್ಷೇತ್ರದಿಂದ ಆಯ್ಕೆಯಾಗುತ್ತಾರೆ. ಕೆಲವರು ವಿಧಾನಸಭಾ ಸದಸ್ಯರ ಮತದಾರ ಸಂಘದಿಂದ ಸ್ಪರ್ಧಿಸುತ್ತಾರೆ. ಮತ್ತೆ ಕೆಲವರನ್ನು ರಾಜ್ಯಪಾಲರು ನೇಮಕ ಮಾಡುತ್ತಾರೆ. ಇದರಂತೇ ರಾಜ್ಯಸಭೆಗೂ ಕೂಡ ಕೆಲವರು ವಿವಿಧ ರಾಜ್ಯಗಳ ವಿಧಾನ ಸಭೆಗಳ ಚುನಾಯಿತ ಸದಸ್ಯರ ಮತದಾರ ಕ್ಷೇತ್ರಗಳಿಂದ ಆಯ್ಕೆಯಾದರೆ ಮತ್ತೆ ಕೆಲವರು ರಾಷ್ಟ್ರಪತಿಗಳಿಂದ ನೇಮಕಗೊಳ್ಳುತ್ತಾರೆ.

(೪) **ರಾಜಕೀಯ ಪಕ್ಷಗಳ ಚುನಾವಣೆಗಳು:**– ರಾಜಕೀಯ ಪಕ್ಷಗಳ ಅಧಿಕಾರಿ ಸ್ಥಾನಗಳಿಗಾಗಿ ಚುನಾವಣೆಗಳಾಗುತ್ತವೆ. ಪ್ರಜಾಪ್ರಭುತ್ವದಲ್ಲಿ ಸಂಸತ್ತು, ವಿಧಾನ ಸಭೆ, ವಿಧಾನ ಪರಿಷತ್ತಿನ ಚುನಾವಣೆಗಳಿಗೆ ಎಷ್ಟು ಮಹತ್ವವೋ ಅಷ್ಟೇ ಮಹತ್ವವೂ ಈ ಚುನಾವಣೆಗಳಿಗೂ ಇರುತ್ತದೆ. ಏಕೆಂದರೆ ಲೋಕಸಭೆ, ವಿಧಾನಸಭೆ ಮೊದಲಾದ ಸದಸ್ಯತ್ವದ ಚುನಾವಣೆಗೆ ನಿಲ್ಲಲು ಅನುಮತಿ (ಟಿಕೇಟ) ಕೊಡುವದು ಪಕ್ಷದ ಅಧಿಕಾರಿ ವರ್ಗದವರ ಕೈಯ್ಯಲ್ಲಿ ಇರುತ್ತದೆ. ಅದರಲ್ಲಿಯು ಬಹುಮತ ಪಕ್ಷ ಆಡಳಿತ ಪಕ್ಷಗಳಲ್ಲಿಯ ರಾಜಕೀಯ ಪಕ್ಷದ ಅಧಿಕಾರ ಸ್ಥಾನ ಬಹಳ ಮಹತ್ವದ್ದು. ಅಂತೆಯೇ ರಾಜಕೀಯ ಪಕ್ಷಗಳ ಅಧ್ಯಕ್ಷ, ಕಾರ್ಯದರ್ಶಿ, ಕಾರ್ಯಕಾರಿ ಸದಸ್ಯರ ಮಂಡಲಗಳ, ಚುನಾವಣೆಗೆ ಬಹಳ ಮಹತ್ವ ಇರುತ್ತವೆ. ಈ ಸ್ಥಾನಗಳಿಗೆ ಚುನಾವಣೆಗಳು ಬೇರೆ ಬೇರೆ ರೀತಿಗಳಲ್ಲಿ ನಡೆಯುತ್ತವೆ. ಕೆಲವು ಸಲ ಪಕ್ಷದ ಮೂಲ ಸದಸ್ಯರಿಂದ ಆಯ್ಕೆಯಾದ ಪ್ರತಿನಿಧಿಗಳ ಮತದಾರ ಸಂಘ ಅಧ್ಯಕ್ಷರನ್ನು ಆಯ್ಕೆ ಮಾಡುತ್ತದೆ. ಕೆಲವು ಪಕ್ಷಗಳ ಅಧ್ಯಕ್ಷರು ಕಾರ್ಯದರ್ಶಿಗಳನ್ನು ನೇಮಕ ಮಾಡಿಕೊಳ್ಳುತ್ತಾರೆ. ಕಾರ್ಯಕಾರಿ ಮಂಡಳಿಯ ಪ್ರತಿನಿಧಿಗಳ ಮತದಾರ ಸಂಘ ಆಯ್ಕೆ ಮಾಡುತ್ತದೆ. ಹೀಗಾಗಿ ಕೆಲ ಪಕ್ಷಗಳಲ್ಲಿ ಅಪ್ರತ್ಯಕ್ಷ ಚುನಾವಣೆ, ನೇರ ಚುನಾವಣೆ, ನೇಮಕ ಮೊದಲಾದ ರೂಢಿಗಳು ಇವೆ. ಮತ್ತೆ ಕೆಲ ಪಕ್ಷಗಳಲ್ಲಿ ಅಧ್ಯಕ್ಷರ ಚುನಾವಣೆಯನ್ನು ಮೂಲ ಪಕ್ಷದ ಸದಸ್ಯರು ನೇರವಾಗಿ ನಡೆಸುತ್ತಾರೆ. ಕೆಲ ರಾಜಕೀಯ ಪಕ್ಷಗಳ ಈ ಅಧಿಕಾರಿ ಸ್ಥಾನಗಳ ಚುನಾವಣೆಗಳು ಬಹಳ ಮಹತ್ವದ್ದು ಇರುತ್ತವೆ.

ಎಲ್ಲ ಪ್ರಕಾರದ ಚುನಾವಣೆಗಳಲ್ಲಿಯ ಅತಿ ಮುಖ್ಯವಾದ ಈ ರಾಜಕೀಯ ಚುನಾವಣೆಯಲ್ಲಿ ಆಯ್ಕೆಯಾಗಲು ಜಾತಕ ಎಂತಿರಬೇಕು? ಗ್ರಹಯೋಗ ಹೇಗಿರಬೇಕು? ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ:**– ಜನಸಾಮಾನ್ಯರಲ್ಲಿ ಪ್ರೀತಿ, ವಿಶ್ವಾಸವನ್ನು ಗಳಿಸಿ ರಾಜಕೀಯ ಹಾಗೂ ಸಾಮಾಜಿಕ ಧುರೀಣರಾಗಿ, ವಿಧಾನ ಮಂಡಳ, ಸಂಸತ್ತು ಮುಂತಾದ ರಾಜಕೀಯ ಸಂಸ್ಥೆಗಳ ಸದಸ್ಯತ್ವ ಹಾಗೂ ರಾಜಕೀಯ

ಪಕ್ಷಗಳಲ್ಲಿಯ ಅಧ್ಯಕ್ಷ, ಕಾರ್ಯದರ್ಶಿ, ಕಾರ್ಯಕಾರೀ ಮಂಡಳದ ಸದಸ್ಯ ಮೊದಲಾದ ಈ ಗೌರವಾನ್ವಿತ ಸ್ಥಾನಾದಿಗಳನ್ನು ಹೊಂದಲು ಕಾರಕ ಗ್ರಹವೆಂದರೆ ರವಿಯು. ರವಿಯು ಬಲಾಢ್ಯನಿರದೇ ಯಾರೂ ಸಾಮಾಜಿಕ ರಾಜಕೀಯ ಕ್ಷೇತ್ರದಲ್ಲಿ ಉತ್ಕರ್ಷ ಹೊಂದಲಾರರು. ರವಿಯು ಬಲಾಢ್ಯನಿದ್ದ ಜಾತಕನಿಗೆ ಅವಕಾಶ, ಸೌಲಭ್ಯ, ಸುಸಂಧಿ ಸಕಾಲದಲ್ಲಿ ದೊರೆತು, ರಾಜಕೀಯದಲ್ಲಿ ಸ್ಥಾನ, ಮಾನ ಪಡೆಯುವ ಸುದೈವಿ ರಾಜಕಾರ ಇರುತ್ತಾನೆ.

ರಾಜಕೀಯ ಚುನಾವಣೆಯಲ್ಲಿ ನೇರ ಹಾಗೂ ಅಪ್ರತ್ಯಕ್ಷ ಎಂಬ ಎರಡು ಪ್ರಕಾರಗಳಿದ್ದು ರವಿ-ಮಂಗಳ-ಶನಿಯರು ಬಲಾಢ್ಯರಿದ್ದ ಜಾತಕನು ನೇರ ಚುನಾವಣೆಯಲ್ಲಿಯೂ ಬುಧ-ಗುರು-ಶುಕ್ರ-ಚಂದ್ರರು ಬಲಾಢ್ಯರಿದ್ದ ವ್ಯಕ್ತಿಗಳು ಅಪ್ರತ್ಯಕ್ಷ ಚುನಾವಣೆಗಳಲ್ಲಿಯೂ ಯಶ ಪಡೆಯುತ್ತಾರೆ. ಆದುದರಿಂದ ಲೋಕಸಭೆ, ವಿಧಾನಸಭೆ ಮೊದಲಾದ ನೇರ ಚುನಾವಣೆಗಳಿಗೆ ರವಿ-ಮಂಗಳ-ಶನಿಯರು ಕಾರಕರಿರುತ್ತಾರೆ. ಇದರಂತೆಯೇ ರಾಜ್ಯಸಭೆ, ವಿಧಾನ ಪರಿಷತ್ತಿನ ಚುನಾವಣೆಗಳಿಗೆ ಬುಧ-ಗುರು-ಶುಕ್ರ-ಚಂದ್ರರು ಕಾರಕರಿರುತ್ತಾರೆ.

ರಾಷ್ಟ್ರಪತಿ, ಉಪರಾಷ್ಟ್ರಪತಿ, ಪ್ರಧಾನಮಂತ್ರಿ, ಮುಖ್ಯಮಂತ್ರಿ, ಸಭಾಪತಿ, ಉಪಸಭಾಪತಿ ಮಂತ್ರಿ, ರಾಜಕೀಯ ಪಕ್ಷಗಳಲ್ಲಿಯ ಅಧ್ಯಕ್ಷ ಕಾರ್ಯದರ್ಶಿ, ಕಾರ್ಯಕಾರೀ ಮಂಡಳದಲ್ಲಿಯ ಸದಸ್ಯ ಇವೇ ಮೊದಲಾದ ರಾಜಕೀಯ ಗೌರವಾನ್ವಿತ ಸ್ಥಾನಾದಿಗಳನ್ನು ಅಲಂಕರಿಸುವ ವ್ಯಕ್ತಿಗಳ ಜಾತಕದಲ್ಲಿ ಈ ಎರಡೂ ಪ್ರಕಾರದ ಗ್ರಹಗಳು ಕಾರಕವಿರುತ್ತವೆ. ಯಾವದೇ ಪ್ರಕಾರದ ಸದಸ್ಯರನ್ನಾಗಿ ರಾಷ್ಟ್ರಪತಿಯಾಗಲೀ, ರಾಜ್ಯಪಾಲರಾಗಲೀ ನೇಮಿಸಲ್ಪಡುವ ವ್ಯಕ್ತಿಗಳ ಜಾತಕದಲ್ಲಿ ರವಿ-ಗುರು-ಶನಿಯರು ಕಾರಕರಿರುತ್ತಾರೆ.

**ಕಾರಕಲಗ್ನ** :- ಲಗ್ನ ದೃಷ್ಟಿಯಿಂದ ನೋಡಿದರೆ, ನಿರ್ದಿಷ್ಟ ಲಗ್ನದವರೇ ರಾಜಕೀಯ ಚುನಾವಣೆಗಳಲ್ಲಿ ಯಶ ಪಡೆಯುವರು ಎಂದು ಹೇಳಲು ಬಾರದಿದ್ದರೂ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ

ತುಲಾ, ವೃಶ್ಚಿಕ, ಧನು ಈ ಎಂಟು ಲಗ್ನದವರು ನೇರವಾದ ರಾಜಕೀಯ ಚುನಾವಣೆಗಳಲ್ಲಿ ಯಶ ಪಡೆದರೆ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಎಂಟು ಲಗ್ನದವರು ಅಪ್ರತ್ಯಕ್ಷ ರೀತಿಯಿಂದ ನಡೆಯುವ ರಾಜಕೀಯ ಚುನಾವಣೆಗಳಲ್ಲಿ ಯಶ ಪಡೆಯುವರು. ಯಾವದೇ ಪ್ರಕಾರದ ಸದಸ್ಯರನ್ನಾಗಿ ರಾಷ್ಟ್ರಪತಿಯಾಗಲಿ, ರಾಜ್ಯಪಾಲರಾಗಲೀ ನೇಮಿಸಲ್ಪಡುವ ವ್ಯಕ್ತಿಗಳ ಜಾತಕದಲ್ಲಿ ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನದವರು ಇರುತ್ತಾರೆ.

**ಸ್ಥಾನ :**-ಈ ಪ್ರಕಾರದ ಗೌರವ ಸ್ಥಾನ ಪಡೆಯಲು ನಮ್ಮ ಅಭಿಪ್ರಾಯದಲ್ಲಿ ಶಿಕ್ಷಣ, ಧನಬಲ, ಪ್ರಭಾವ, ವರ್ಚಸ್ಸು, ಜಾತಿ, ಪಂಥ ಮೊದಲಾದವುಗಳ ಅರ್ಹತೆಯ ಪರಿಣಾಮವಾಗದೆ, ಕೇವಲ ಭಾಗ್ಯದ ಮೇಲೆಯೇ ಹೆಚ್ಚು ಅವಲಂಬಿಸಿರುವದರಿಂದ ಭಾಗ್ಯ ಸ್ಥಾನವೇ ಕಾರಕ ಸ್ಥಾನವಾಗುತ್ತದೆ. ಭಾಗ್ಯಸ್ಥಾನದ ನಂತರ ಲಗ್ನ ದಶಮ, ಚತುರ್ಥ, ಪಂಚಮ, ತೃತೀಯ ಈ ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ. ಆದರೆ ನೇರವಾದ ಚುನಾವಣೆಯಲ್ಲಿ ಯಶ ಪಡೆಯಲು ಲಗ್ನ, ದಶಮ, ತೃತೀಯ, ಭಾಗ್ಯ ಈ ಸ್ಥಾನಗಳು ಸ್ಥಾನಾಧೀಶರು ಕಾರಕವಿದ್ದರೆ, ಅಪ್ರತ್ಯಕ್ಷ ರೀತಿಯ ಚುನಾವಣೆಗಳಲ್ಲಿ ಯಶ ಪಡೆಯಲು ಚತುರ್ಥ, ಪಂಚಮ, ಭಾಗ್ಯ ಈ ಸ್ಥಾನಗಳೂ ಸ್ಥಾನಾಧೀಶರೂ ಕಾರಕರಿರುತ್ತಾರೆ. ಯಾವುದೇ ಪ್ರಕಾರದ ಸದಸ್ಯರನ್ನಾಗಿ ರಾಷ್ಟ್ರಪತಿಯಾಗಲೀ, ರಾಜ್ಯಪಾಲರಾಗಲೀ, ನೇಮಿಸಲ್ಪಡುವ ವ್ಯಕ್ತಿಗಳ ಜಾತಕದಲ್ಲಿ ಚತುರ್ಥ, ಭಾಗ್ಯ ಈ ಎರಡು ಸ್ಥಾನಗಳು ಕಾರಕವಿರುತ್ತವೆ.

**ರಾಶಿ :**-ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೆ ರಾಜಕೀಯ ಚುನಾವಣೆಯಲ್ಲಿ ಯಶಸ್ಸು ಹೊಂದುವರೆಂದು ಹೇಳಲುಬಾರದು.

**ಯೋಗಬಲ :**-ಚುನಾವಣೆಯಲ್ಲಿ ಸ್ಪರ್ಧಿಸಿ, ಯಶಸ್ವಿಗಳಾದವರೇ ಇರಲಿ, ಇಲ್ಲವೇ ಹಾಗೆಯೇ ನೇಮಿಸಲ್ಪಟ್ಟವರೇ ಇರಲಿ, ನಿರ್ದಿಷ್ಟವಾದ

ಯೋಗಗಳು ಇಲ್ಲದೇ ಯಾರೂ ಇಂಥ ಗೌರವ ಸ್ಥಾನಗಳನ್ನು ಅಲಂಕರಿಸಲಾರರು. ಅದರಲ್ಲಿಯೂ ಚುನಾವಣೆ ಒಂದು ದೊಡ್ಡ ಪ್ರಮಾಣದ ಸ್ಪರ್ಧೆ. ಅಲ್ಲಿ ಯಶ ದೊರೆಯಬೇಕಾದರೆ ಗ್ರಹಗಳ ಯಶೋಕಾರಕ ಸುಯೋಗವಾಗಿರುವದು ಅವಶ್ಯವಿದೆ. ಗುರು-ಚಂದ್ರ, ಗುರು-ಮಂಗಳ, ಗುರು-ರವಿ, ಗುರು-ಶುಕ್ರ, ಚಂದ್ರ-ಶುಕ್ರ, ಬುಧ-ಶುಕ್ರ, ಶನಿ-ಶುಕ್ರ, ಬುಧ-ಶನಿ, ರವಿ-ಮಂಗಳ, ಈ ಗ್ರಹಗಳ ಯುತಿಯೋಗವಾಗಲೀ ಅನ್ಯೋನ್ಯ ರಾಶಿಯೋಗವಾಗಲೀ ಪ್ರತಿಯೋಗವಾಗಲೀ, ತ್ರಿಕೋಣಯೋಗವಾಗಲೀ ಮೊದಲಾದ ವಿವಿಧ ಶುಭಕಾರಕ ಯೋಗಗಳು ಲಗ್ನ, ಪಂಚಮ, ಚತುರ್ಥ, ದಶಮ, ಭಾಗ್ಯಸ್ಥಾನಗಳಲ್ಲಿರಬೇಕು. ಈ ಕೆಳಗೆ ಹೇಳಿದ ಯೋಗಗಳಲ್ಲಿ ಯಾವುದೊಂದು ಯೋಗವು ಯಾರೊಬ್ಬ ವ್ಯಕ್ತಿಯ ಜಾತಕದಲ್ಲಿದ್ದರೆ, ಅವರು ಚುನಾವಣೆಯಂಥ ಸ್ಪರ್ಧೆಯಲ್ಲಿ ವಿಜಯಿಗಳಾಗುವರೆಂದು ಹೇಳಬಹುದು.

೧) ಮೇಷ, ಸಿಂಹ, ಧನು, ಲಗ್ನಗಳಿದ್ದು, ರವಿ-ಗುರುಗಳು ಲಗ್ನ, ಭಾಗ್ಯ, ಪಂಚಮ ಸ್ಥಾನಗಳಿದ್ದರೆ,

೨) ಧನು ಲಗ್ನವಿದ್ದು, ಭಾಗ್ಯಸ್ಥಾನದಲ್ಲಿ ರವಿಯೂ ಲಾಭಸ್ಥಾನದಲ್ಲಿ ಶುಕ್ರನು, ಲಗ್ನದಲ್ಲಿ ಗುರುವೂ ಇದ್ದರೆ,

೩) ವೃಶ್ಚಿಕ ಲಗ್ನದ ದಶಮ ಸ್ಥಾನದಲ್ಲಿ ರವಿಯೂ ಭಾಗ್ಯದಲ್ಲಿ ಚಂದ್ರನೂ, ಕುಜನು ಲಗ್ನ, ದ್ವಿತೀಯ, ದಶಮಸ್ಥಾನಗಳಲ್ಲಿ ಅಲಂಕರಿಸಿರುವಾಗ,

೪) ವೃಶ್ಚಿಕ ಲಗ್ನವಿದ್ದು, ಭಾಗ್ಯದಲ್ಲಿ ಗುರು-ಚಂದ್ರರೂ ದಶಮದಲ್ಲಿ ರವಿಯು ಇದ್ದರೇ,

೫) ಕರ್ಕ ಲಗ್ನವಿದ್ದು, ಲಗ್ನ, ಚತುರ್ಥ, ಭಾಗ್ಯದಲ್ಲಿ ಗುರು-ಶುಕ್ರ ಗುರು-ಚಂದ್ರ, ಶುಕ್ರ-ಚಂದ್ರ, ರವಿ-ಮಂಗಳರ ಶುಭಯೊಗವಿದ್ದರೆ, ಇಂಥ ಜಾತಕನ ಚುನಾವಣೆಯಲ್ಲಿ ಯಶಸ್ಸು ಕಟ್ಟಿಟ್ಟಿದಂತೆ,

೬) ರವಿ, ಭಾಗ್ಯೇಶರು ಬಲಿಷ್ಟರಿದ್ದರೆ,

೭) ಲಗ್ನೇಶ, ಚತುರ್ಥೇಶ ಗ್ಯೇಶರು ಭಾಬಲಿಷ್ಟರಿದ್ದರೆ,

೮) ಮಿಥುನ ಲಗ್ನವಿದ್ದು, ಲಗ್ನ, ಚತುರ್ಥ, ಭಾಗ್ಯ,ದಶಮ ಈ ಸ್ಥಾನ ಗಳಲ್ಲಿ ಬುಧ-ಶುಕ್ರ, ಗುರು-ಬುಧ, ಗುರು-ಶುಕ್ರ-ಶನಿ-ಬುಧರ ಶುಭಯೋಗ ವಿದ್ದರೆ.

೯) ಮೇಷ, ಸಿಂಹ, ಧನು ಲಗ್ನಗಳಿದ್ದು, ರವಿ–ಗುರು–ಮಂಗಳರ ಶುಭ ಯೋಗವಿದ್ದರೆ.

೧೦) ಸಿಂಹ ಲಗ್ನವಿದ್ದು, ರವಿ-ಮಂಗಳ-ಗುರು ಇವುಗಳ ಶುಭ ಯೋಗವು ಲಗ್ನ, ಪಂಚಮ, ಭಾಗ್ಯದಲ್ಲಿದ್ದರೆ.

೧೧) ವೃಷಭ ಲಗ್ನವಿದ್ದು ರವಿ, ಬುಧ, ಶನಿ, ಶುಕ್ರರ ಶುಭಯೋಗವು ಲಗ್ನ, ಚತುರ್ಥ, ಪಂಚಮ, ಭಾಗ್ಯ ದಶಮದಲ್ಲಿದ್ದರೆ,

೧೨) ತುಲಾ ಲಗ್ನವಿದ್ದು,ಶುಕ್ರ-ಚಂದ್ರ–ಶನಿಯರು, ಬಲಾಢ್ಯರಿದ್ದರೆ, ಅಥವಾ ಶುಕ್ರ–ಚಂದ್ರ,ಶುಕ್ರ–ಶನಿಯರ ಶುಭಯೋಗ ಲಗ್ನ, ಚತುರ್ಥ, ಪಂಚಮ, ದಶಮ ದಲ್ಲಿದ್ದರೆ,

೧೩) ಮಕರ ಲಗ್ನವಿದ್ದು ಶನಿ–ಶುಕ್ರ–ಮಂಗಳ–ಬುಧರು ಬಲಾಢ್ಯ ರಿದ್ದರೆ,

೧೪) ಕುಂಭ ಲಗ್ನವಿದ್ದು ಶನಿ, ಶುಕ್ರರು ಬಲಾಢ್ಯರಿದ್ದರೆ, ಅಥವಾ ಶನಿ–ಶುಕ್ರರ ಶುಭಯೊಗವು ಲಗ್ನ, ಚತುರ್ಥ, ಪಂಚಮ, ಭಾಗ್ಯದಲ್ಲಿದ್ದರೆ.

೧೫) ಅನೇಕ ಗ್ರಹಗಳು ಉದಿತ ಗೋಲಾರ್ಧದಲ್ಲಿದ್ದರೆ,

೧೬) ಅನೇಕ ಗ್ರಹಗಳು ಸ್ವಕ್ಷೇತ್ರ, ಉಚ್ಚ, ಮಿತ್ರ ಕ್ಷೇತ್ರದಲ್ಲಿದ್ದರೆ,

೧೭) ರವಿ, ಲಗ್ನೇಶ, ಚತುರ್ಥೇಶ, ಪಂಚಮೇಶ, ಭಾಗ್ಯೇಶ,ದಶಮೇಶ ಈ ಆರು ಸಂಗತಿಗಳಲ್ಲಿ ಯಾವದೇ ನಾಲ್ಕು ಸಂಗತಿಗಳು ಪೋಷಕವಿದ್ದರೆ,

ಮೇಲೆ ಬರೆದ ಯೋಗಗಳಲ್ಲಿ ಜನಿಸಿದ ವ್ಯಕ್ತಿಗಳಿಗೆ ಯಾವದೇ ಚುನಾವಣೆಯಲ್ಲಿ ಯಶ ಲಭಿಸುತ್ತದೆ.

**೩. ಸ್ಥಾನಿಕ ಹಾಗೂ ಸಹಕಾರೀ ಸಂಘ, ಸಂಸ್ಥೆಗಳ ಚುನಾವಣೆಗಳು.**

ಮುನಸಿಪಲ್ ಕಾರ್ಪೋರೇಶನ್ನಗಳು, ಮುನಸಿಪಾಲಟಿಗಳು, ತಾಲುಕ ಅಭಿವೃದ್ಧಿ ಮಂಡಳಿಗಳು, ಜಿಲ್ಹಾ ಪರಿಷತ್ತುಗಳು, ಒಕ್ಕಲುತನ ಅಭಿವೃಧ್ಧಿ ಮಂಡಳಿಗಳು. (APMC), ಪಂಚಾಯಿತಿಗಳು ಮೊದಲಾದ ಸ್ಥಾನಿಕ ಸಂಸ್ಥೆಗಳ ಚುಣಾವಣೆಗಳು ಸಹಕಾರಿ ಸಂಘಗಳು, ರೆಗ್ಯೂಲೆಟಿಂಗ ಮಾರ್ಕೆಟ, ಸೊಸೈಟಿಗಳ, ಮೊದಲಾದ ಸಹಕಾರೀ ಸಂಸ್ಥೆಗಳ ಚುನಾವಣೆಳೆಂದು ವರ್ಗೀಕರಿಸಬಹುದು. ಇದರಲ್ಲಿಯೂ ಎರಡು ರೀತಿಯಾಗಿ ವಿಂಗಡಿಸಬಹುದು. ಈ ಸಂಸ್ಥೆಗಳ ಸದಸ್ಯರ ಆಯ್ಕೆ ಇಲ್ಲವೇ ಚುನಾವಣೆಗಳ ಸಾರ್ವತ್ರಿಕವಾದರೆ, ಅವುಗಳ ಅಧಿಕಾರಿಯೇತರ ಮುಖ್ಯ ಸ್ಥಾನಕ್ಕೆ ಅಪ್ರತ್ಯಕ್ಷ ಚುನಾವಣೆಗಳಿರುತ್ತವೆ. ಉದಾ ಮುನಸಿಪಲ್ ಕಾರ್ಪೋರೇಶನ ಸದಸ್ಯರ ಚುನಾವಣೆಗಳು ನೇರು ಆಯ್ಕೆ ಆದರೆ ಕಾರ್ಪೋರೇಶನ್ನದ ಮೇಯರ್, ಉಪಮೇಯರ್, ಅಧ್ಯಕ್ಷ,ಉಪಾಧ್ಯಕ್ಷ,ಸ್ಟ್ಯಾಂಡಿಂಗ ಕಮಿಟಿ ಚೇರಮನ್, ಮೊದಲಾದ ಸ್ಥಾನಗಳನ್ನು ಅಪ್ರತ್ಯಕ್ಷ ರೀತಿಯಿಂದಆಯ್ಕೆ ಮಾಡುವರು. ಇದರಂತೆಯೇ ತಾಲುಕಾ ಅಭಿವೃಧ್ಧಿ ಮಂಡಳಿ, ಮುನಸಿಪಾಲಟಿ, ಪಂಚಾಯಿತಿ, ಜಿಲ್ಹಾ ಪರಿಷತ್, ಇವುಗಳ ಸಧಸ್ಯರ ಆಯ್ಕೆ ನೇರವಾಗಿ ನಡೆದರೆ ಅವುಗಳ ಅಧ್ಯಕ್ಷ, ಉಪಾದ್ಯಕ್ಷ, ಚೇರಮಾನ್ ಮೊದಲಾ ಅಧಿಕಾರೀ ವರ್ಗದವರನ್ನು ಚುನಾಯಿತ ಸದಸ್ಯರು ಆಯ್ಕೆ ಮಾಡುವರು. ಅರ್ಥಾತ್ ಅಪ್ರತ್ಯಕ್ಷರೀತಿಯ ಆಯ್ಕೆ ಆಗುತ್ತವೆ. ಈ ಪ್ರಕಾರದ ಸ್ಥಾನಿಕ ಹಾಗೂ ಸಹಕಾರೀ ಸಂಘ ಸಂಸ್ಥೆಗಳ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಜಾತಕ ಎಂತಿರಬೇಕು? ಕಾರಕ, ಗ್ರಹ, ಲಗ್ನ ಸ್ಥಾನಾಧಿಗಳಾವವು? ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—**ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರದಲ್ಲಿ ಮೇಲೆ ವಿವರಿಸಿದಂತೆ ಭಿನ್ನ ಭಿನ್ನ ಕ್ಷೇತ್ರಗಳು, ಭಿನ್ನ ಭಿನ್ನ ಉದ್ದೇಶ ವಿರಿಸಿಕೊಂಡ ಸಂಘ-ಸಂಸ್ಥೆಗಳು, ಭಿನ್ನ ಭಿನ್ನ ಹೊಣೆಗಾರಿಕೆ ಇದ್ದ ಹುದ್ದೆಗಳು ಬರುತ್ತವೆ.

ಗ್ರಾಮ ಪಂಚಾಯ್ತಿ, ಟೌನಪಂಚಾಯ್ತಿ, ತಾಲೂಕಾ ಅಭಿವೃದ್ಧಿ ಮಂಡಳ, ಮುನಸಿಪಾಲಟಿ, ಕಾರ್ಪೋರೇಶನ್ ಮೊದಲಾದ ಸ್ಥಾನಿಕ ಸಂಸ್ಥೆಗಳ ಸದಸ್ಯರು, ಪದಾಧಿಕಾರಿಗಳಿಗೆ ರಾಜಕೀಯ ಚುನಾವಣೆ ಕಾರಕ ಗ್ರಹವಾದ ರವಿಯೊಂದಿಗೆ ಸ್ಥಾನಿಕ ಸಂಸ್ಥೆಯ ಚುನಾವಣೆಯ ಕಾರಕ ಗ್ರಹವಾದ ಶನಿಯ ಬಲಾಬಲವನ್ನು ಪರಿಶೀಲಿಸಬೇಕು. ಶನಿಯು ಬಲಾಢ್ಯನಿರದೆ, ಯಾರೂ ಸ್ಥಾನಿಕ ಸಂಸ್ಥೆಗಳ ಚುನಾವಣೆಗಳಲ್ಲಿ ಯಶ ಹೊಂದಲಾರರು.

ಇದರಂತೆ ಮಾರ್ಕೆಟಿಂಗ್ ಸೊಸೈಟಿ ಮೊದಲಾದ ಸಹಕಾರೀ ಸಂಘ ಸಂಸ್ಥೆಗಳ ಸದಸ್ಯರಾಗಲೀ, ಪದಾಧಿಕಾರಿಗಳಾಗಲು ರವಿಯೊಂದಿಗೆ ಬುಧನ ಬಲಾಬಲವನ್ನು ಪರಿಶೀಲಿಸಬೇಕು. ಬುಧನು ಬಲಾಢ್ಯನಿರದೇ ಯಾರೂ ಸಹಕಾರೀ ಸಂಸ್ಥೆಗಳ ಚುನಾವಣೆಯಲ್ಲಿ ಯಶಸ್ಸು ಪಡೆಯಲಾರರು.

ಈ ಎರಡೂ ಸಂಸ್ಥೆಗಳ ಚುನಾವಣೆಗಳಲ್ಲಿ ನೇರ, ಅಪ್ರತ್ಯಕ್ಷ, ರೀತಿಯ ಚುನಾವಣೆಗಳಿರುವದರಿಂದ ಆಯಾ ಪ್ರಕಾರದ ಕಾರಕ ಗ್ರಹದ ಬಲಾಬಲಗಳನ್ನು ಪರಿಶೀಲಿಸಬೇಕಾಗುತ್ತದೆ. ಅದರಲ್ಲಿಯೂ ಮೇಯರ, ಉಪಮೇಯರ, ಅಧ್ಯಕ್ಷ-ಉಪಾಧ್ಯಕ್ಷ, ಚೇರಮನ್ ಮೊದಲಾದ ಪ್ರತಿಷ್ಠಿತ, ಗೌರವಾನ್ವಿತ ಸ್ಥಾನಗಳನ್ನು ಪಡೆಯಲು ಜಾತಕದಲ್ಲಿ ರವಿ-ಶನಿ-ಗುರು-ಬುಧರು ಬಲಾಢ್ಯರಿರಲೇಬೇಕು.

**ಕಾರಕಲಗ್ನ:**-ಲಗ್ನದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ಲಗ್ನದವರೇ ಸ್ಥಾನಿಕ ಹಾಗೂ ಸಹಕಾರೀ ಸಂಸ್ಥೆಗಳ ಚುನಾವಣೆಗಳಲ್ಲಿ ಯಶಸ್ಸು ಪಡೆಯುವರು ಎಂದು ಹೇಳಲು ಬಾರದಿದ್ದರೂ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ ಈ ಏಳು ಲಗ್ನದವರು ಸ್ಥಾನಿಕ ಚುನಾವಣೆಗಳಲ್ಲಿಯೂ, ವೃಷಭ, ಮಿಥುನ, ಸಿಂಹ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಎಂಟು ಲಗ್ನದವರು ಸಹಕಾರೀ ಸಂಘ ಸಂಸ್ಥೆಗಳ ಚುನಾವಣೆಗಳಲ್ಲಿ ಯಶಗಳಿಸುವರು.

ಈ ಎರಡೂ ಸಂಸ್ಥೆಗಳ ಚುನಾವಣೆಗಳಲ್ಲಿ, ನೇರ, ಅಪ್ರತ್ಯಕ್ಷ ರೀತಿಯ ಚುನಾವಣೆಗಳಿರುವದರಿಂದ ಆಯಾ ಪ್ರಕಾರದ ಕಾರಕ ಲಗ್ನ, ಸ್ಥಾನ, ಯೋಗಗಳನ್ನು ಪರಿಶೀಲಿಸಬೇಕು.

**ಕಾರಕ ಸ್ಥಾನ:**—ಈ ಪ್ರಕಾರದ ಚುನಾವಣೆಗಳಲ್ಲಿ ಸ್ಪರ್ಧಿಸಲು ಜಾತಕನು ಸ್ವತಂತ್ರ ಉದ್ಯೋಗಿ ಇರಬೇಕಾಗಿರುವದರಿಂದ ಉದ್ಯೋಗದ ಸ್ಥಾನಗಳಾದ ಷಷ್ಠ, ದಶಮ, ಚತುರ್ಥ, ದ್ವಿತೀಯ, ಸ್ಥಾನಗಳು ಪೂರಕ ವಿರಬೇಕು. ಅದರಲ್ಲಿಯೂ ಸ್ವತಂತ್ರ ಉದ್ಯೋಗಿಗಳ ಸ್ಥಾನಗಳಾದ ಷಷ್ಠ, ಚತುರ್ಥ ಸ್ಥಾನಗಳು ಕಾರಕವಿರುತ್ತವೆ.

ಈ ಸ್ಥಾನಗಳ ನಂತರ ಚುನಾವಣೆಯ ಕಾರಕ ಸ್ಥಾನಗಳಾದ ಲಗ್ನ, ಭಾಗ್ಯ, ತೃತೀಯ, ಚತುರ್ಥ, ದಶಮಸ್ಥಾನಗಳ ಬಲಾಬಲವನ್ನು ಪರಿಶೀಲಿಸ ಬೇಕು. ಅದರಲ್ಲಿಯೂ ಮೇಯರ-ಉಪಮೇಯರ, ಅಧ್ಯಕ್ಷ-ಉಪಾ ಧ್ಯಕ್ಷ, ಚೇರಮನ್, ಮೊದಲಾದ ಗೌರವದ ಸ್ಥಾನಗಳನ್ನು ಪಡೆಯುವ ವ್ಯಕ್ತಿಗಳ ಜಾತಕದಲ್ಲಿ ಲಗ್ನ, ಚತುರ್ಥ, ಭಾಗ್ಯ, ದಶಮ, ಪಂಚಮ ಈ ಸ್ಥಾನಗಳು ಕ್ರಮವಾಗಿ ಬಲಾಢ್ಯವಿರಬೇಕಾಗುತ್ತದೆ.

**ರಾಶಿ** :—ನಿರ್ದಿಷ್ಠ ರಾಶಿಯವರೇ ಸ್ಥಾನಿಕ ಚುನಾವಣೆಯಲ್ಲಿ ಯಶಸ್ಸು ಪಡಿಯುವರೆಂದು ಹೇಳಲುಬಾರದು.

**ಯೋಗಬಲ** :—ರಾಜಕೀಯ ಚುನಾವಣೆಯಲ್ಲಿರುವ ಗ್ರಹಯೋಗ ಗಳೇ ಈ ಸ್ಥಾನಿಕ ಹಾಗೂ ಸಹಕಾರೀ ಸಂಘ ಸಂಸ್ಥೆಗಳ ಚುನಾವಣೆಗೂ ಇರುತ್ತವೆ. ಇವುಗಳ ವಿವರಣೆ ಇವೇ ಪ್ರಕರಣದ ೩೮-೩೯ ಪುಟಗಳಲ್ಲಿ ವಿವರಿಸಲಾಗಿದೆ.

## ೩. ಶೈಕ್ಷಣಿಕ ಸಂಸ್ಥೆಗಳ ಚುನಾವಣೆಗಳು.

ವಿಶ್ವವಿದ್ಯಾಲಯಗಳ ಸಿನೇಟ್, ಸಿಂಡಿಕೇಟ, ಅಕ್ಯಾಡಮಿಕ್ ಕೌನ್ಸಿಲ್, ಉಪಕುಲಪತಿ, ಮೊದಲಾದ ಚುನಾವಣೆಗಳೂ ಶಿಕ್ಷಣ ಸಂಸ್ಥೆ ಗಳ ಗವ್ಹರ್ನಿಂಗ ಸಮಿತಿಗಳ ವ್ಯವಸ್ಥಾಪಕ ಮಂಡಳ ಸದಸ್ಯತ್ವ, ಅಧ್ಯಕ್ಷ ಉಪಾಧ್ಯಕ್ಷ, ಕಾರ್ಯಾಧ್ಯಕ್ಷ, ಚೇರಮನ್, ಕಾರ್ಯದರ್ಶಿ, ಇವೇ ಮೊದ ಲಾದ ಸ್ಥಾನಗಳಿಗೆ ಚುನಾವಣೆಗಳಿರುತ್ತವೆ. ಈ ಎಲ್ಲವುಗಳನ್ನು ಶೈಕ್ಷಣಿಕ ಸಂಸ್ಥೆಗಳ ಚುನಾವಣೆಯಲ್ಲಿ ಪರಿಗಣಿಸಬಹುದು.

ಸಾಮಾನ್ಯವಾಗಿ ವಿಶ್ವವಿದ್ಯಾಲಯಗಳ ಸಿನೇಟಿಗೆ ಕೆಲವರು ನೇಮಕಗೊಂಡರೆ, ಮತ್ತೆ ಕೆಲವರು ಚುನಾಯಿಸಲ್ಪಡುತ್ತಾರೆ. ಕಾಲೇಜ ಪ್ರಿನ್ಸಿಪಾಲರು ತಮ್ಮ ಸ್ಥಾನಬಲದಿಂದ ಸಿನೇಟ ಸದಸ್ಯರಾಗುತ್ತಾರೆ. ಇಂಜಿನೀಯರಿಂಗ, ಮೆಡಿಕಲ್, ಕಾಮರ್ಸ್, ಕಾಯ್ದೆ, ಹಾಗೂ ಇತರ ಪದವೀಧರ ಕ್ಷೇತ್ರಗಳಿಂದ ಆಯ್ಕೆಯಾಗಿ ಸಿನೇಟ ಸದಸ್ಯರಾಗುತ್ತಾರೆ. ಕೆಲವರು ವಿಧಾನಮಂಡಲದ ಪ್ರತಿನಿಧಿಗಳಾಗಿ ಸಿನೇಟ ಸದಸ್ಯರಾಗುತ್ತಾರೆ. ರಾಜ್ಯಪಾಲರಿಂದ ನೇಮಕಗೊಂಡ ಸಿನೇಟ ಸದಸ್ಯತ್ವವನ್ನು ಕೆಲವರು ಪಡೆಯುತ್ತಾರೆ.

ಇದರಂತೆಯೇ ಅಕೆಡೆಮಿಕ್‌ಕೌನ್ಸಿಲದಲ್ಲಿ(ವಿದ್ಯಾಮಂಡಳ)ಕಾಲೇಜುಗಳ ಪ್ರಿನ್ಸಿಪಾಲರೂ, ಸ್ನಾತಕೋತ್ತರ ವಿಭಾಗದ ಮುಖ್ಯಸ್ಥರೂ, ಸದಸ್ಯರಾಗುತ್ತಾರೆ. ಸಿನೇಟದಿಂದ ಕೆಲವರು ಅಕೆಡೆಮಿಕ್ ಕೌನ್ಸಿಲಿಗೆ ಆಯ್ಕೆಯಾಗುತ್ತಾರೆ.

ಸಿನೇಟ ಹಾಗೂ ಅಕೆಡೆಮಿಕ್ ಕೌನ್ಸಿಲ್ ಸದಸ್ಯರು ಸಿಂಡಿಕೇಟ ಸದಸ್ಯರನ್ನು ಆಯ್ಕೆ ಮಾಡುತ್ತಾರೆ. ಈ ಸಿಂಡಿಕೇಟ ಚುನಾವಣೆಗಳು ಅಪ್ರತ್ಯಕ್ಷ ರೀತಿಯ ಚುನಾವಣೆಗಳಾಗಿರುತ್ತವೆ. ಇದರಂತೆಯೇ ಕೆಲ ವಿಶ್ವವಿದ್ಯಾಲಯಗಳಲ್ಲಿ ಉಪಕುಲಪತಿಗಳನ್ನು ಸಿನೇಟ ಆಯ್ಕೆ ಮಾಡಿದರೆ, ಕೆಲವು ವಿಶ್ವವಿದ್ಯಾಲಯಗಳಲ್ಲಿ ಉಪಕುಲಪತಿಗಳು ನೇಮಕಗೊಳ್ಳುತ್ತಾರೆ.

ಇನ್ನು ಶಿಕ್ಷಣ ಸಂಸ್ಥೆಗಳ ವ್ಯವಸ್ಥಾಪಕ ಮಂಡಳಿಗಳಿಗೂ ಚುನಾವಣೆಗಳು ನಡೆಯುತ್ತವೆ. ಆಯಾ ಶಿಕ್ಷಣ ಸಂಸ್ಥೆಗಳ ಸದಸ್ಯರು ಮಂಡಳ ಸದಸ್ಯರನ್ನು ಅಧಿಕಾರೀ ವರ್ಗಗಳಾದ ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯಾಧ್ಯಕ್ಷರನ್ನು ಆಯ್ಕೆ ಮಾಡುತ್ತಾರೆ. ಆಯಾ ಸಂಸ್ಥೆಗಳ ಘಟನೆಯ ರಚನೆಯ ಪ್ರಕಾರ ಚುನಾವಣೆಯ ಪದ್ಧತಿ ಆಧಾರಪಟ್ಟಿರುತ್ತದೆ.

ಈ ಪ್ರಕಾರದ ಶೈಕ್ಷಣಿಕ ಸಂಸ್ಥೆಗಳ ಚುನಾವಣೆಯಲ್ಲಿ ಯಶಹೊಂದಲು ಜಾತಕ ಎಂತಿರಬೇಕು, ? ಕಾರಕ ಲಗ್ನ, ಸ್ಥಾನಾದಿಗಳಾವವು ? ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** - ಸಿನೇಟ, ಸಿಂಡಿಕೇಟ, ಅಕೆಡೆಮಿಕ್ ಕೌನ್ಸಿಲ್ ಮೊದಲಾದ ವಿಶ್ವವಿದ್ಯಾಲಯದ ಸದಸ್ಯರಾಗಲೀ, ಸ್ಕೂಲಬೋರ್ಡಗಳ ಸದಸ್ಯರಾಗಲೀ, ಶಿಕ್ಷಣ ಸಂಸ್ಥೆಗಳ ವ್ಯವಸ್ಥಾಪಕ ವರ್ಗದ ಸದಸ್ಯತ್ವ ಪಡೆಯಲು ಶಿಕ್ಷಣ ಕ್ಷೇತ್ರದ ಕಾರಕ ಗ್ರಹವಾದ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕು. ಶಿಕ್ಷಣ ಪ್ರಗತಿಯ ಸಂಬಂಧವೇ ಪ್ರಮುಖವಾಗಿರುವದರಿಂದ ವಿದ್ಯೆ ಹಾಗೂ ಜ್ಞಾನದ ಅಧಿಪತಿಯಾಗಿರುವ ಗುರುವು ಬಲಾಢ್ಯನಿರದೇ ಯಾರೂ ಈ ಶೈಕ್ಷಣಿಕ ಚುನಾವಣೆಗಳಲ್ಲಿ ಯಶಸ್ಸುಪಡೆಯಲಾರರು. ಅದರಲ್ಲಿಯೂ ಸಿಂಡಿಕೇಟ, ಹಾಗೂ ಅಕೆಡೆಮಿಕ್ ಕೌನ್ಸಿಲ್‌ದ ಸದಸ್ಯತ್ವ ಪಡೆಯುವವರ ಜಾತಕದಲ್ಲಿ "ಗುರುವಿನ ಗುರುತ್ವ" ವಿರಬೇಕಾಗುತ್ತವೆ. ಗುರುವಿನ ತರುವಾಯ ಬುಧನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

ಸಿನೇಟ ಸದಸ್ಯತ್ವದಲ್ಲಿ ಅನೇಕ ಪ್ರಕಾರಗಳಿರುವದರಿಂದ ಅನೇಕ ಗ್ರಹಗಳ ಬಲಾಬಲ ಪರಿಶೀಲಿಸಬೇಕಾಗುತ್ತದೆ. ಉದಾ : ರಾಜ್ಯಪಾಲರಿಂದ (ಸರಕಾರದಿಂದ) ನೇಮಿಸಲ್ಪಡುವ ಸಿನೇಟ ಸದಸ್ಯರ ಜಾತಕದಲ್ಲಿ ಹಾಗೂ ವಿಧಾನ ಮಂಡಳದ ಪ್ರತಿನಿಧಿಯಾಗಿರುವ ಸಿನೇಟ ಸದಸ್ಯರ ಜಾತಕದಲ್ಲಿ ವಿಶ್ವವಿದ್ಯಾಲಯದ ಸದಸ್ಯತ್ವದ ಕಾರಕಗ್ರಹವಾದ ಗುರುವಿನೊಂದಿಗೆ ಸರಕಾರೀ ಕಾರಕಗ್ರಹವಾದ ರವಿಯ ಬಲಾಬಲವನ್ನು ಪರಿಶೀಲಿಸಬೇಕಾಗುತ್ತವೆ. ಅಥವಾ ಇಂಥ ಸಿನೇಟರ ಜಾತಕದಲ್ಲಿ ಗುರುವು ಕೇವಲ ರಾಶಿ ಬಲದವನಿದ್ದು, ಸ್ಥಾನಬಲದವನಿರುವದಿಲ್ಲ. ಅಥವಾ ಸ್ಥಾನಬಲ-ರಾಶಿ ಬಲದವನಿದ್ದಾಗ್ಯೂ ಅಸ್ತ, ವಕ್ರೀ, ವೃದ್ಧಾಪ್ಯ ಮೊದಲಾಗಿ ನಿರ್ಬಲನಿದ್ದು, ಗುರುವಿಗಿಂತ ರವಿ-ಶನಿ-ಬುಧರೇ ಬಲಾಢ್ಯರಿರುತ್ತಾರೆ. ಇದರಂತೆ ವಿಭಿನ್ನ ವಿಷಯಗಳ ಪದವೀಧರ ಕ್ಷೇತ್ರದಿಂದ ಸಿನೇಟ ಸದಸ್ಯತ್ವಪಡೆಯುವ ಅಭ್ಯರ್ಥಿಗಳ ಜಾತಕದಲ್ಲಿ ಆಯಾ ಪದವೀಕಾರಕ ಗ್ರಹಗಳ ಬಲಾಬಲ ಪರಿಶೀಲಿಸಬೇಕು. ಉದಾ : ಕಾಯದೇ ವಿಷಯಕಾರಕ ಶನಿ ಇದ್ದರೆ, ವಾಣಿಜ್ಯ ವಿಷಯಕಾರಕ ಬುಧನಿರುತ್ತಾನೆ. ಹೀಗೆ ವಿಭಿನ್ನ ವಿಷಯಗಳ ಪದವೀಧರ ಕ್ಷೇತ್ರದ ಆಯಾ ವಿಷಯಗಳ ಕಾರಕ ಗ್ರಹಗಳ ಬಲಾಬಲವನ್ನು ಗುರುವಿನೊಂದಿಗೆ ತುಲನಾತ್ಮಕವಾಗಿ ಪರಿಶೀಲಿಸಬೇಕು.

ಇನ್ನು ಶಿಕ್ಷಣ ಸಂಸ್ಥೆಗಳ ಸದಸ್ಯತ್ವ ಹಾಗೂ ವ್ಯವಸ್ಥಾಪಕ ವರ್ಗದ ಅಧಿಕಾರ ವರ್ಗಗಳ ಸ್ಥಾನಗಳ ಚುನಾವಣೆಯಲ್ಲಿ ಯಶ ದೊರಕಿಸಲು ಶಿಕ್ಷಣ ಕಾರಕ ಗ್ರಹವಾದ ಗುರುವಿನೊಂದಿಗೆ ಆಡಳಿತ, ಮೇಲ್ವಿಚಾರಕ, ವ್ಯವಸ್ಥಾಪಕ, ಗುಣಧರ್ಮಗಳ ಕಾರಕ ಗ್ರಹವಾದ ರವಿಯ ಬಲಾಬಲವನ್ನು ಪರಿಶೀಲಿಸಬೇಕು.

**ಕಾರಕ ಲಗ್ನ** :–ನಿರ್ದಿಷ್ಟ ಲಗ್ನದವರೇ ಶೈಕ್ಷಣಿಕ ಸಂಸ್ಥೆಗಳ ಚುನಾವಣೆಯಲ್ಲಿ ಚುನಾಯಿತರಾಗುವರೆಂಬ ನಿಯಮವಿಲ್ಲದಿದ್ದರೂ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಹೆಚ್ಚಾಗಿರುವದು ಕಂಡು ಬರುತ್ತದೆ. ಈ ಲಗ್ನಗಳ ನಂತರ ವೃಷಭ, ಕರ್ಕ, ಕನ್ಯಾ, ಕುಂಭ ಈ ಲಗ್ನದವರು ಇರುವದನ್ನು ನೋಡಬಹುದಾಗಿದೆ.

ಸಿಂಡಿಕೇಟ, ಅಕೆಡೆಮಿಕ್‌ಕೌನ್ಸಿಲ್, (ವಿದ್ಯಾಮಂಡಳ) ಉಪಕುಲಪತಿ, ವ್ಯವಸ್ಥಾಪಕ ವರ್ಗದ ಅಧ್ಯಕ್ಷ, ಚೇರಮನ್, ಕಾರ್ಯದರ್ಶಿ, ಕಾರ್ಯಾಧ್ಯಕ್ಷ, ಮೊದಲಾದ ಪ್ರತಿಷ್ಠಿತ, ಗೌರವಾನ್ವಿತ ಸ್ಥಾನಗಳ ಚುನಾವಣೆಗಳು ಅಪ್ರತ್ಯಕ್ಷ ರೀತಿಯಿಂದ ನಡೆಯುವದರಿಂದ ಅಪ್ರತ್ಯಕ ಚುನಾವಣೆಕಾರಕ ಲಗ್ನಗಳನ್ನು ಪರಿಶೀಲಿಸಬೇಕು.

**ಕಾರಕ ಸ್ಥಾನ** :–ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ, ಶೈಕ್ಷಣಿಕ ಚುನಾವಣೆಗಳಿಗೆ ಅನೇಕ ಸ್ಥಾನಗಳು ಕಾರಕವಿರುತ್ತವೆ. ರಾಜ್ಯಪಾಲರಿಂದ ನೇಮಿಸಲ್ಪಡುವ ಸಿನೇಟ ಸದಸ್ಯರಿಗೂ ವಿಧಾನ ಮಂಡಳದ ಪ್ರತಿನಿಧಿಯಾಗಿ ಸಿನೇಟರಾಗುವ ಸದಸ್ಯರ ಜಾತಕದಲ್ಲಿಯೂ ಚತುರ್ಥ ಸ್ಥಾನವನ್ನೂ ನೇರ ಚುನಾವಣೆಯಿಂದ ಸಿನೇಟ ಸದಸ್ಯರಾಗುವವರ ಜಾತಕದಲ್ಲಿ ಲಗ್ನ, ದಶಮ ಸ್ಥಾನಗಳು ಕಾರಕವಿರುತ್ತವೆ. ಇದರಂತೆ ಅಕೆಡೆಮಿಕ್‌ಕೌನ್ಸಿಲ್ ಹಾಗೂ ಸಿಂಡಿಕೇಟ ಚುನಾವಣೆಗಳಿಗಾಗಿ ಶಿಕ್ಷಕ ವೃತ್ತಿಯ ಕಾರಕ ಸ್ಥಾನಗಳಾದ ದ್ವಿತೀಯ, ಪಂಚಮ ಸ್ಥಾನಗಳನ್ನೂ ಪರಿಶೀಲಿಸಬೇಕು. ಇದೂ ಅಲ್ಲದೇ, ಶಿಕ್ಷಣ ಸಂಸ್ಥೆಗಳ ವ್ಯವಸ್ಥಾಪಕ ಅಧಿಕಾರೀ ವರ್ಗಗಳ ಚುನಾವಣೆಗಾಗಿ ಆಡಳಿತ ಸ್ಥಾನಗಳಾದ ಲಗ್ನ (ತನುಸ್ಥಾನ), ಭಾಗ್ಯಸ್ಥಾನಗಳ ಬಲಾಬಲವನ್ನು

ಪರಿಶೀಲಿಸಬೇಕಾಗುತ್ತದೆ. ಇದೂ ಅಲ್ಲದೆ ನೇರ, ಅಪ್ರತ್ಯಕ್ಷ ರೀತಿಯಿಂದ ಜರುಗಲಿರುವ ಚುನಾವಣೆಗಾಗಿ ಆಯಾ ಪ್ರಕಾರದ ಕಾರಕ ಸ್ಥಾನಗಳ ಸ್ಥಾನಾಧೀಶರ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

**ರಾಶಿ** :-ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ, ನಿರ್ದಿಷ್ಟ ರಾಶಿಯವರೇ ಶೈಕ್ಷಣಿಕ ಚುನಾವಣೆಗಳಲ್ಲಿ ಯಶಸ್ಸು ಪಡೆಯುವರೆಂದು ಹೇಳಲು ಬಾರದು.

**ಯೋಗ** :—ಶೈಕ್ಷಣಿಕ ಸಂಸ್ಥೆಗಳ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಈ ಕೆಳಗೆ ಕಾಣಿಸಿದ ಯೋಗಗಳಿರುತ್ತವೆ.

೧) ಗುರುವು, ಕರ್ಕ, ಧನು, ಮೀನ ಇಲ್ಲವೇ ಮಿಥುನ, ತುಲಾ, ಕುಂಭ ಈ ರಾಶಿಯವನಿರುತ್ತಾನೆ.

೨) ಬುಧ-ಶುಕ್ರರು ವೃಷಭ, ಮಿಥುನ, ತುಲಾ. ಕುಂಭ, ಮಕರ, ಕನ್ಯಾ, ಮೀನ ಈ ರಾಶಿಯವರಿರುತ್ತಾರೆ.

೩) ದ್ವಿತೀಯೇಶ, ಪಂಚಮೇಶ, ಗುರು, ರವಿ, ಬುಧ ಈ ಐದು ಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗಳು ಪೂರಕವೂ ಪೋಷಕವೂ ಇರುತ್ತವೆ.

೪) ಬುಧ, ಗುರು, ಶುಕ್ರ, ಚಂದ್ರರಲ್ಲಿ ಯಾವುದೇ ಎರಡು ಗ್ರಹಗಳು ಬಲಾಢ್ಯರಾಗಿ ಲಗ್ನ, ದ್ವಿತೀಯ, ಪಂಚಮ ಈ ಯಾವುದೊಂದು ಸ್ಥಾನದಲ್ಲಿದ್ದರೆ,

೫) ಬುಧ-ಶುಕ್ರ, ಗುರು-ಶುಕ್ರ, ಗುರು-ಚಂದ್ರ, ರವಿ-ಗುರು, ಗುರು-ಮಂಗಳ, ಈ ಗ್ರಹಗಳ ಯುತಿಯೋಗವು ಲಗ್ನ, ಪಂಚಮ, ದ್ವಿತೀಯ, ತೃತೀಯ, ಭಾಗ್ಯ ಈ ಯಾವುದೊಂದು ಸ್ಥಾನದಲ್ಲಿದ್ದರೆ.

ಈ ಮೇಲೆ ತೋರಿಸಿದ ಯಾವುದೊಂದು ಯೋಗದಲ್ಲಿ ಜನಿಸಿದ ವ್ಯಕ್ತಿಗಳು ಶೈಕ್ಷಣಿಕ ಚುನಾವಣೆಯಲ್ಲಿ ಯಶಸ್ಸು ಪಡೆಯುತ್ತಾರೆ.

**ವಿ. ಸೂ.** :–ಉಪಕುಲಪತಿ. ಶೈಕ್ಷಣಿಕ ಸಂಸ್ಥೆಗಳ ಅಧ್ಯಕ್ಷ, ಕಾರಾಧ್ಯಕ್ಷ, ಚೇರಮನ್ ಕಾರ್ಯದರ್ಶಿ ಮೊದಲಾದ ಹುದ್ದೆಗಳು ಹಾಗೂ ಸಿಂಡಿಕೇಟ ಅಕೆಡೆಮಿಕ್‌ಕೌನ್ಸಿಲ್‌ದ ಸದಸ್ಯತ್ವ ಪಡೆಯಲು ರಾಜಕೀಯ ಚುನಾವಣೆಯಲ್ಲಿರುವ ಗ್ರಹಯೋಗಗಳನ್ನು ಪರಿಶೀಲಿಸಬೇಕು. ಇವುಗಳ ವಿವರಣೆ ಇದೇ ಪ್ರಕರಣದ ೩೮–೩೯ನೇ ಪುಟದಲ್ಲಿ ಕೊಡಲಾಗಿದೆ.

## ೪. ಸಾಂಸ್ಕೃತಿಕ, ಸಾಹಿತ್ತಿಕ, ವೃತ್ತಿ–ಸೇವಾ ಸಂಸ್ಥೆಗಳ ಚುನಾವಣೆಗಳು

ಸಮಾಜದ ವಿವಿಧ ರಂಗಗಳಲ್ಲಿ ಸೇವೆ ಮಾಡುವ ನಾನಾ ಬಗೆಯ ಸಂಸ್ಥೆಗಳು ಕಾರ್ಯ ಮಾಡುತ್ತವೆ. ಈ ಎಲ್ಲ ಸಂಸ್ಥೆಗಳಲ್ಲಿಯ ಅಧಿಕಾರೀ ಸ್ಥಾನಗಳಿಗೆ ಚುನಾವಣೆಗಳು ನಡೆಯುತ್ತವೆ. ಸಾಹಿತ್ಯ ಕ್ಷೇತ್ರದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ವಿದ್ಯಾವರ್ಧಕ ಸಂಘ, ಮುಂತಾದ ಸಂಸ್ಥೆಗಳ ಅಧಿಕಾರೀ ಸ್ಥಾನಕ್ಕೆ ಚುನಾವಣೆಗಳಾಗುತ್ತವೆ. ಇದರಂತೆಯೇ ನಾಟಕ, ಸಾಮಾಜಿಕಸಾಂಸ್ಕೃತಿಕ ಸಂಘಗಳ ಅನೇಕವಿದ್ದು, ಇವುಗಳ ಅಧಿಕಾರೀ ಸ್ಥಾನಗಳಿಗೆ ಚುನಾವಣೆಗಳು ನಡೆಯುತ್ತವೆ.

ರೋಟರೀ, ಲೈಯನ್ಸ, ಜ್ಯುನಿಯರ್ ಚೇಂಬರ್ಸ್ (ಸರ್ವೀಸ್ ಕ್ಲಬ್ ಮೊದಲಾದ ಸೇವಾ ಸಂಸ್ಥೆಗಳ ಅಧಿಕಾರೀ ಸ್ಥಾನಗಳಿಗೆ ಚುನಾವಣೆಗಳು ನಡೆಯುತ್ತವೆ. ಇದೂ ಅಲ್ಲದೆ, ವಕೀಲರ ಸಂಘ, ವೈದ್ಯರುಗಳ ಸಂಘ, ವಣಿಕಸಂಘ, ಶಿಕ್ಷಕರಸಂಘ, ಮೊದಲಾದ ಆಯಾ ವೃತ್ತಿದಾರರ ವೃತ್ತಿಸಂಸ್ಥೆಗಳ ಅಧಿಕಾರಸ್ಥಾನಗಳಿಗೂ ಚುನಾವಣೆ ನಡೆಯುತ್ತವೆ. ಇದರಂತೆ ಭಾರತಸೇವಕಸಂಘ, ಭಾರತಸಾಧುಸಮಾಜ, ಮೊದಲಾದ ಸೇವಾ ಸಂಸ್ಥೆಗಳ ಅಧಿಕಾರಸ್ಥಾನಕ್ಕೂ ಆಯ್ಕೆಯಾಗುತ್ತದೆ. ಇದೂ ಅಲ್ಲದೆ, ಧಾರ್ಮಿಕ ಸಂಸ್ಥೆಗಳ ಗುಡಿ, ಮಠಗಳ, ಭಜನ ಮಂದಿರಗಳ ಟ್ರಸ್ಟಗಳ ಅಧಿಕಾರ ವರ್ಗಗಳಿಗೆ ಚುನಾವಣೆಗಳು ನಡೆಯುತ್ತವೆ. ಇವೇ ಮೊದಲಾದ ಸಾಂಸ್ಕೃತಿಕ, ಸಾಹಿತ್ತಿಕ, ಸೇವಾವೃತ್ತಿ, ಧಾರ್ಮಿಕ ಮೊದಲಾದ ಸಂಸ್ಥೆಗಳ

ಚುನಾವಣೆಯಲ್ಲಿ ಯಶದೊರಕಿಸಲು ಜಾತಕ ಎಂತಿರಬೇಕು? ಕಾರಕ ಗ್ರಹ, ಲಗ್ನ, ಸ್ಥಾನಾದಿಗಳಾವವು? ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ** :– ಈ ವಿವಿಧ ಸಂಘ ಸಂಸ್ಥೆಗಳ ಚುನಾವಣೆಯಲ್ಲಿ ಯಶ ಪಡೆಯಲು ಅನೇಕ ಗ್ರಹಗಳು ಕಾರಕ ವಿದ್ದು ಅನೇಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಸಾಹಿತ್ಯ, ಸಂಗೀತ, ನಾಟಕ, ಮೊದಲಾದ ಲಲಿತ ಕಲೆಗಳ ಪ್ರಗತಿಯ ಧ್ಯೇಯವಾಗಿರುವ ಸಂಘ ಸಂಸ್ಥೆಗಳ ಚುನಾವಣೆಗೆ ಬುಧ, ಶುಕ್ರ, ಚಂದ್ರರು ಕಾರಕರಿದ್ದು, ಇವರೊಂದಿಗೆ ಚುನಾವಣೆಯ ಕಾರಕ ಗ್ರಹವಾದ ರವಿಯ ಬಲಾಬಲ ವನ್ನು ಪರಿಶೀಲಿಸಬೇಕು.

ಇದರಂತೆ ಲಾಯನ್ಸ, ರೋಟರಿ, ಜ್ಯೂನಿಯರ ಚೇಂಬರ್ಸ ಮೊದ ಲಾದ ಸೇವಾಸಂಸ್ಥೆಗಳ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಜಾತಕದಲ್ಲಿ ರವಿ, ಬುಧ, ಶುಕ್ರ, ಚಂದ್ರ, ಶನಿಯರು ಬಲಾಢ್ಯರಿರಬೇಕು. ಆದರೆ ವಣಿಕ್ ಸಂಸ್ಥೆಗಳ ಚುನಾವಣೆಯಲ್ಲಿ ಯಶಸ್ಸು ಪಡೆಯಲು ವ್ಯಾಪಾರೀ ಕಾರಕ ಗ್ರಹಗಳಾದ ಬುಧ, ಶುಕ್ರ, ಶನಿಯರೊಂದಿಗೆ ರವಿಯ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಇದರಂತೆ ಆಯಾ ವೃತ್ತಿ ಸಂಸ್ಥೆಗಳ ಚುನಾವಣೆಗೆ ಆಯಾ ವೃತ್ತಿ ಕಾರಕ ಗ್ರಹಗಳ ಬಲಾಬಲದೊಂದಿಗೆ ರವಿಯ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಉದಾ: ಶಿಕ್ಷಕ ಸಂಘದ ಚುನಾವಣೆಗೆ ಶಿಕ್ಷಕವೃತ್ತಿ ಕಾರಕ ಗ್ರಹವಾದ ಗುರುವನ್ನು ಚುನಾವಣೆಕಾರಕ ಗ್ರಹವಾದ ರವಿಯೊಂದಿಗೆ, ವಕೀಲಿ ವೃತ್ತಿಸಂಘಕ್ಕೆ ವಕೀಲಿ ವೃತ್ತಿ ಕಾರಕ ಗ್ರಹವಾದ ಶನಿಯನ್ನು, ಧಾರ್ಮಿಕ ಸಂಸ್ಥೆಗಳಾದ ಗುಡಿ-ಮಠಗಳ ಸಂಸ್ಥೆಗಳ ಕಾರಕ ಗ್ರಹವಾದ ಗುರುವನ್ನು ಚುನಾವಣೆ ಕಾರಕ ಗ್ರಹವಾದ ರವಿಯೊಂದಿಗೆ ಪರಿಶೀಲಿಸಬೇಕು. ಇಲ್ಲಿ ನೆನಪಿಡಬೇಕಾದ ಸಂಗತಿಯೆಂದರೆ ವೃತ್ತಿಕಾರಕ ಗ್ರಹಗಳು ರಾಶಿ ಬಲದವರೂ ಸ್ಥಾನಬಲದವರೂ, ಯೋಗ ಕಾರಕರೂ ಇದ್ದರೆ, ಚುನಾವಣೆ ಕಾರಕ ಗ್ರಹವಾದ ರವಿಯು ಕೇವಲ ರಾಶಿ ಬಲದವನಿರುತ್ತಾನೆ. ಇದರ ವಿರುದ್ಧ ಚುನಾವಣೆ ಕಾರಕ ಗ್ರಹವಾದ ರವಿಯು ರಾಶಿ ಬಲದವ, ಸ್ಥಾನಬಲದವ, ಯೋಗಕಾರಕರಿದ್ದು, ವೃತ್ತಿ

ಕಾರಕ ಗ್ರಹಗಳು ಕೇವಲ ರಾಶಿ ಬಲದವರಿದ್ದರೆ, ಅಂಥ ಜಾತಕರು ರಾಜಕೀಯ ಚುನಾವಣೆಯಲ್ಲಿ ಯಶಸ್ಸು ಗಳಿಸುತ್ತಾರೆ. ಅಥವಾ ಚುನಾವಣೆ ಎಂಬುದೇ ವೃತ್ತಿಯಾಗಿರುತ್ತದೆ.

**ಕಾರಕಸ್ಥಾನ:**- ವಿವಿಧ ಸಂಘಸಂಸ್ಥೆಗಳ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಅನೇಕ ಸ್ಥಾನಗಳನ್ನು ಪರೀಕ್ಷಿಲಿಸಬೇಕಾಗುತ್ತದೆ. ಏಕೆಂದರೆ ವಿವಿಧ ವೃತ್ತಿಗಳಿಗೆ ವಿವಿಧ ಸ್ಥಾನಗಳು ಕಾರಕವಿರುವದರಿಂದ ಆಯಾ ವೃತ್ತಿ ಕಾರಕ ಸ್ಥಾನಗಳೊಡನೆ ಚುನಾವಣೆ ಕಾರಕ ಸ್ಥಾನಗಳ ಬಲಾಬಲ ವನ್ನು ಪರಿಶೀಲಿಸಬೇಕಾಗುತ್ತದೆ. ಉದಾ: ಶಿಕ್ಷಕ ಹಾಗೂ ವಕೀಲ ವೃತ್ತಿಗಳಿಗೆ ಕಾರಕಸ್ಥಾನಗಳಾದ ದ್ವಿತೀಯ, ಪಂಚಮ ಸ್ಥಾನಗಳೊಂದಿಗೆ ಚುನಾವಣೆ ಕಾರಕಸ್ಥಾನಗಳಾದ ಲಗ್ನ, ಭಾಗ್ಯ, ಸ್ಥಾನಗಳನ್ನೂ ಪರಿಶೀಲಿಸಬೇಕಾಗುತ್ತದೆ. ಇದರಂತೆ ಲೈಯನ್ಸ, ರೋಟರಿ, ಜ್ಯೂನಿಯರ ಚೆಂಬರ್ಸ್, ವಣಿಕ ಸಂಘ, ಮೊದಲಾದ ಸಂಸ್ಥೆಗಳ ಆಯಾ ವೃತ್ತಿಗಳಿಗೆ ಕಾರಕಸ್ಥಾನಗಳಾದ ದ್ವಿತೀಯ, ಷಷ್ಠ, ಚತುರ್ಥ ಸ್ಥಾನಗಳೊಂದಿಗೆ ಚುನಾವಣೆ ಕಾರಕ ಸ್ಥಾನಗಳಾದ ಭಾಗ್ಯ, ತನು ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ. ಇದರಂತೆಯೇ ಧಾರ್ಮಿಕ ಸಂಸ್ಥೆಗಳ, ಚುನಾವಣೆಗೆ ಲಗ್ನ, ಭಾಗ್ಯ, ಚತುರ್ಥ ಸ್ಥಾನಗಳನು ಪರಿಶೀಲಿಸಬೇಕಾಗುಗುತ್ತದೆ. ಹೀಗೆ ವಿವಿಧ ಸಂಘ ಸಂಸ್ಥೆಗಳ ಚುನಾವಣೆಗೆ ಆಯಾ ಸಂಸ್ಥೆಗಳ, ವ್ಯಕ್ತಿಯ, ವೃತ್ತಿಯ, ಕಾರಕ ಸ್ಥಾನಗಳೊಂದಿಗೆ ಚುನಾವಣಾ ಕಾರಕ ಸ್ಥಾನಗಳ ಬಲಾಬಲದೊಂದಿಗೆ ಪರಿಶೀಲಿಸ-ಬೇಕಾಗುತ್ತದೆ.

**ಕಾರಕ ಲಗ್ನ:**- ನಿರ್ದಿಷ್ಟವಾದ ಲಗ್ನದವರೇ ಇಂಥ ಸಂಸ್ಥೆಗಳ ಚುನಾವಣೆಗಳಲ್ಲಿ ಯಶಸ್ಸು ಪಡೆಯುವರು ಎಂದು ಹೇಳಲು ಬಾರದಿದ್ದರೂ ಸಾಹಿತ್ಯ, ಸಂಗೀತ, ನಾಟಕ ಮೊದಲಾದ ಲಲಿತ ಕಲೆಗಳ ಸಂಘ, ಸಂಸ್ಥೆಗಳ ಚುನಾವಣೆಗೆ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರೂ; ಲಾಯನ್ಸ, ರೋಟರಿ, ಜುನಿಯರ್‌ಚೆಂಬರ, ವಣಿಕ್ ಸಂಘ ಮೊದಲಾದ ಸಂಸ್ಥೆಗಳ ಚುನಾವಣೆಗೆ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ ಕುಂಭ ಈ ಲಗ್ನದವರೂ,

ವಕೀಲ,ಶಿಕ್ಷಕ,ವೈದ್ಯಕೀಯ ವೃತ್ತಿ ಸಂಘ,ಸಂಸ್ಥೆಗಳ ಚುನಾವಣೆಗೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನದವರೂ, ಧಾರ್ಮಿಕ ಸಂಸ್ಥೆಗಳ ಚುನಾವಣೆಗೆ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ ಧನು, ಮೀನ, ಈ ಲಗ್ನದವರೂ ಹೆಚ್ಚಾಗಿರುವದು ಕಂಡುಬರುತ್ತದೆ.

**ರಾಶಿ:**- ನಿರ್ಧಿಷ್ಟ ರಾಶಿಯುವರೇ, ಈ ಸಂಸ್ಥೆಗಳ ಚುನಾವಣೆಗಳಲ್ಲಿ ಯಶ ದೊರಕಿಸುವರೆಂದು ಹೇಳಲು ಬಾರದು.

**ಯೋಗ**:- ಸಾಮಾನ್ಯವಾಗಿ ಈ ಸ್ವತಂತ್ರ ಉದ್ಯೋಗಸ್ಥರು ಈ ತರಹದ ಚುನಾವಣೆಗಳಲ್ಲಿ ಸ್ಪರ್ಧಿಸುವದರಿಂದ ಈ ಕೆಳಗೆ ಕಾಣಿಸಿದ ಯೋಗ ಯಶಗಳಿರುವದು ಕಂಡುಬರುತ್ತದೆ.

೧) ಷಷ್ಠ, ಚತುರ್ಥ,ದ್ವಿತೀಯ, ದಶಮ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಇವರ ಜಾತಕದಲ್ಲಿ ಬಲಾಢ್ಯರಿರಬೇಕು. ೨) ಲಗ್ನೇಶ ಷಷ್ಠೇಶ ನಿರ್ಬಲನಿರಕೂಡದು, ೩) ಷಷ್ಠ, ಚತುರ್ಥ, ದ್ವಿತೀಯ ಈ ಯಾವದೇ ಎರಡು ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿರಬೇಕು

**೫: ಕಾರ್ಮಿಕ ಸಂಘ-ಸಂಸ್ಥೆಗಳ ಹಾಗೂ ಮಾಲಕ ಅಧಿಕಾ ವರ್ಗಗಳ ಚುನಾವಣೆಗಳು.**

೧) **ಕಾರ್ಮಿಕರ ಸಂಘ ಸಂಸ್ಥೆಗಳ ಚುನಾವಣೆಗಳು:**-ಕಾರ್ಮಿಕ ಸಂಘಗಳ ಚುನಾವಣೆಯೆಂದಾಗ ಮುಖ್ಯವಾಗಿ ಎರಡು ಬಗೆಯ ಚುನಾವಣೆಗಳನ್ನು ಪರಿಗಣಿಸಬೇಕಾಗುತ್ತದೆ.ಒಂದು ಬಗೆಯ ಕಾರ್ಮಿಕ ಸಂಘಗಳಲ್ಲಿ ಕೇವಲ ಕಾರ್ಮಿಕರೇ ಚುನಾವಣೆಗೆ ನಿಂತು ವಿವಿಧ ಸ್ಥಾನಗಳಿಗೆ ಆಯ್ಕೆಯಾಗುವದು. ಇನ್ನೊಂದು ಬಗೆಯ ಕಾರ್ಮಿಕ ಸಂಘಗಳಲ್ಲಿ ಮುಖ್ಯ ಅಧಿಕಾರೀ ಸ್ಥಾನಗಳಾದ ಅಧ್ಯಕ್ಷ, ಕಾರ್ಯದರ್ಶಿ, ಸ್ಥಾನಗಳಿಗೆ ಕಾರ್ಮಿಕರಲ್ಲದವರನ್ನು ಆಯ್ಕೆಮಾಡಿ ಇತರ ಸ್ಥಾನಗಳಿಗೆ ಕಾರ್ಮಿಕರನ್ನು ಆಯ್ಕೆ ಮಾಡಲಾಗುತ್ತದೆ. ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಯಾವ ಕಾರ್ಮಿಕ ಸಂಘ, ಯಾವ ರಾಜಕೀಯ ಪಕ್ಷದೊಡನೆ ಅಂಗ ಸಂಸೆ

K133 · 5

ಯಾಗಿ ಕಾರ್ಯ ನಿರ್ವಹಿಸುತ್ತದೆ. ಏಕೆಂದರೆ ಈ ವಿಭಿನ್ನ ರಾಜಕೀಯ ಪಕ್ಷಗಳು ಕಾರ್ಮಿಕ ಸಂಘಗಳ ಸ್ಥಾಪನೆ ಪ್ರಾರಂಭಿಸಿರುವಾಗ ಆಯಾ ರಾಜಕೀಯ ಪಕ್ಷಕ್ಕೆ ಒಲವುವುಳ್ಳವರನ್ನು ನಾಯಕರನ್ನಾಗಿ ಆಯ್ಕೆ ಮಾಡಿಸಿಕೊಳ್ಳಲು ಯತ್ನಿಸುತ್ತಾರೆ. ಕಾರ್ಮಿಕ ಸಂಘಗಳ ಚುನಾವಣೆಯಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, ಕಾರ್ಮಿಕ ಸಂಘಗಳ ವಿವಿಧ ಮಟ್ಟಗಳ ಚುನಾವಣೆಗಳಿರುತ್ತವೆ. ಉದಾ.- ಸ್ಥಾನಿಕ ಶಾಖೆ, ಪ್ರಾಂತೀಯ ಶಾಖೆ, ರಾಷ್ಟ್ರೀಯ ಶಾಖೆ, ಮೊದಲಾಗಿ. ಒಮ್ಮೊಮ್ಮೆ ಜಾಗತಿಕ ಸಂಸ್ಥೆಗೆ ಕಾರ್ಮಿಕ ಸಂಘಗಳ ಪ್ರತಿನಿಧಿಯ ಚುನಾವಣೆಗಳೂ ಬರುತ್ತವೆ. ಹೀಗಾಗಿ ಕಾರ್ಮಿಕ ಸಂಘ,ಸಂಸ್ಥೆಗಳ ಚುನಾವಣೆಯಲ್ಲಿಯೂ ವೈವಿಧ್ಯತೆ ಇದ್ದು, ಈ ಚುನಾವಣೆಗಳಲ್ಲಿ ಯಶಪಡೆಯಲು ಜಾತಕ ಎಂತಿರಬೇಕು? ಕಾರಕ ಗ್ರಹ ಲಗ್ನ, ಸ್ಥಾನಾಧಿಗಳಾವವು? ಎಂಬದನ್ನು ಪರಿಶೀಲಿಸುವಾ.

**ಕಾರಕ ಗ್ರಹ:**–ಕಾರ್ಮಿಕರ ಇಲ್ಲವೆ ನೌಕರರ ಕಲ್ಯಾಣ ಹಾಗೂ ಹಿತಸಾಧನೆಯೇ ಮುಖ್ಯ ಧ್ಯೇಯವಿರುವವೇ ಈ ಸಂಘ-ಸಂಸ್ಥೆಗಳ ಹೊಣೆ ಇರುವದರಿಂದ, ಇಂಥ ಸಂಘ–ಸಂಸ್ಥೆಗಳಲ್ಲಿ ಪದಾಧಿಕಾರಿಗಳಾಗಿಯೂ, ಸದಸ್ಯರಾಗಿಯೂ ಇಲ್ಲವೇ ಪ್ರತ್ಯಕ್ಷ-ಅಪ್ರತ್ಯಕ್ಷವಾಗಿ ಭಾಗವಹಿಸಿ ಶ್ರಮಿಸಲು ಕಾರಕ ಗ್ರಹವೆಂದರೆ ಶನಿಯು. **ಶನಿಯು ಬಲಾಢ್ಯನಿರದೆ, ಯಾರೂ ಈ ಸಂಘ-ಸಂಸ್ಥೆಗಳಲ್ಲಿ ಯಶಸ್ಸು ಪಡೆಯಲಾರರು.**

ಈ ಸಂಘ–ಸಂಸ್ಥೆಗಳಲ್ಲಿ ಕಾರ್ಯ ಮಾಡುವದು ಈ ಹಿಂದೆ ವಿವರಿಸಿದಂತೆ ಎರಡು ವರ್ಗದವರಿದ್ದು (೧) ಯಾವುದೊಂದು ರಾಜಕೀಯ ಪಕ್ಷಗಳಲ್ಲಿಯ ಪ್ರಮುಖರು, ಮುಖಂಡರು, ಮೊದಲಾದವರು ಪದಾಧಿ–ಕಾರಿಗಳಾಗಿ ನೌಕರರ, ಕಾರ್ಮಿಕರ, ಮಾರ್ಗದರ್ಶನ ಮಾಡುವ ಒಂದು ವರ್ಗ. (೨) ವಿವಿಧ ಖಾತೆಗಳಲ್ಲಿ ಕೆಲಸ ಮಾಡುತ್ತ, ಕೆಲಸದ ಜೊತೆಗೆ ಈ ಸಂಘ-ಸಂಸ್ಥೆಗಳ ಪದಾಧಿಕಾರಿಗಳಾಗಿ ಈ ಸಂಘ–ಸಂಸ್ಥೆಗಳ ಹಿತ ರಕ್ಷಣೆಗಾಗಿ ಶ್ರಮಿಸುವ ಎರಡನೇ ವರ್ಗ.

ಮೊದಲನೇ ವರ್ಗದವರ ಜಾತಕದಲ್ಲಿ ಕಾರ್ಮಿಕರ ಕಾರಕ ಗ್ರಹ ೬ದ ಶನಿಯೊಂದಿಗೆ ರಾಜಕೀಯ ಗ್ರಹವಾದ ರವಿಯೂ ಬಲಾಢ್ಯನಿರು-

ತ್ತಾನೆ. ಆದರೆ ಇಲ್ಲಿ ಶನಿಯು ಕೇವಲ ರಾಶಿ ಬಲವವನಿದ್ದು, ಸ್ಥಾನ ಬಲವವನಿರುವದಿಲ್ಲ. ರವಿಯು ಸ್ಥಾನಬಲದವನೂ, ರಾಶಿಬಲದವನೂ, ಯೋಗಕಾರಕನೂ ಇರುತ್ತಾನೆ.

ಎರಡನೇ ವರ್ಗದವರ ಜಾತಕದಲ್ಲಿ ಶನಿಯು ರಾಶಿ ಬಲದವನೂ ಸ್ಥಾನ ಬಲದವನೂ ಯೋಗಕಾರಕನೂ ಇರುವನಲ್ಲದೇ ಇವರ ಜಾತಕದಲ್ಲಿ ಬುಧ, ಗುರುಗಳು ಕೂಡ ಬಲಾಢ್ಯರಿರುತ್ತಾರೆ.

**ಲಗ್ನ:** – ಸಾಮಾನ್ಯವಾಗಿ ಇವರ ಜಾತಕದಲ್ಲಿ ವೃಷಭ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಈ ಲಗ್ನದವರೇ ಇರುವದು ಕಂಡು ಬರುತ್ತದೆ. ಇವುಗಳ ನಂತರ ಮೇಷ, ಮಕರ, ಕುಂಭ, ಮೀನ ಈ ಲಗ್ನದವರು ಇರುವದು ಕಂಡುಬರುತ್ತದೆ.

**ಸ್ಥಾನ:**—ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ, ಅನೇಕ ಸ್ಥಾನಗಳು ಕಾರಕವಾಗುತ್ತವೆ. ಏಕೆಂದರೆ, ಈ ಸಂಘ ಸಂಸ್ಥೆಗಳಲ್ಲಿಯ ಪದಾಧಿ-ಕಾರಿಗಳು ಉತ್ತಮ ಭಾಷಣಕಾರರು ಇರುವದರಿಂದ ವಕ್ತೃತ್ವದ ಸ್ಥಾನ ವಾದ ದ್ವಿತೀಯ ಸ್ಥಾನವೂ, ಇವರು ಉತ್ತಮ ಬರಹಗಾರರು ಇರುವದ-ರಿಂದ ಬರಹಗಾರ ಕಲೆಯನ್ನು (Drafting) ಸ್ಥಾನವಾದ ಪಂಚಮ ಸ್ಥಾನವೂ ಇವರು ಉತ್ತಮ ವ್ಯಕ್ತಿತ್ವ ಪಡೆದವರಿರುವದರಿಂದ ವ್ಯಕ್ತಿತ್ವದ ಸ್ಥಾನವಾದ ತನು (ಲಗ್ನ) ಸ್ಥಾನವೂ, ಕಾರ್ಮಿಕರ ಸ್ಥಾನವಾದ ದಶಮ ಸ್ಥಾನವೂ ಬಲಾಢ್ಯವಿರಬೇಕು. ಹೀಗಾಗಿ ಕಾರ್ಮಿಕ ಪದಾಧಿಕಾರಿಗಳ ಚುನಾವಣೆಗಳಲ್ಲಿ ಯಶಸ್ಸು ಪಡೆಯಲು ಲಗ್ನ – ಲಗ್ನೇಶ, ದ್ವಿತಿಯ–ದ್ವಿತಿಯೇಶ, ಪಂಚಮ–ಪಂಚಮೇಶ, ದಶಮ–ದಶಮೇಶ, ಈ ಸಂಗತಿ ಗಳು ಪೋಷಕವಿರಬೇಕಾಗುತ್ತದೆ.

**ರಾಶಿ:**- ನಿರ್ದಿಷ್ಟ ರಾಶಿಯವರೇ ಇಂಥ ಸಂಘ ಸಂಸ್ಥೆಗಳ ಚುನಾ ವಣೆಯಲ್ಲಿ ಯಶಸ್ಸು ಪಡೆಯುವರೆಂದು ಹೇಳಲು ಬಾರದಿದ್ದರೂ ಹೆಚ್ಚಾಗಿ ಕಾರ್ಮಿಕರಲ್ಲಿಯ ಬುದ್ಧಿ ಜೀವಿಗಳಾಗಿ ಮಾರ್ಗದರ್ಶನ ಮಾಡುವ ಇವರು ಮಿಥುನ, ತುಲಾ, ಕುಂಭ, ಮೀನ, ವೃಶ್ಚಿಕ, ಮಕರ, ಕರ್ಕ ಈ ರಾಶಿ ಯವರೇ ಹೆಚ್ಚಾಗಿ ಇರುವದು ಕಂಡು ಬರುತ್ತದೆ.

**ಮಾಲಕ, ಅಧಿಕಾರಿಗಳ ಸಂಘಗಳ ಚುನಾವಣೆಗಳು:**— ಕಾರ್ಮಿಕರ ಸಂಘಗಳಿದ್ದಂತೆ ಮಾಲಕರ ಸಂಘಗಳೂ ಇರುತ್ತವೆ. ಕಾರ್ಮಿಕರು ತಮ್ಮ ಹಕ್ಕುಗಳ ಹೋರಾಟಕ್ಕಾಗಿ ಕಾರ್ಮಿಕ ಸಂಘಗಳನ್ನು ರಚಿಸಿ ಕೊಳ್ಳುವಂತೆ ಮಾಲಕರು ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಸಂಘಗಳನ್ನು ರಚಿಸಿ ಕೊಳ್ಳುತ್ತಾರೆ. ಉದಾ:-ಹೋಟೆಲ ಒಡೆಯರ ಸಂಘ, ಮುದ್ರಣಾಲಯದ ಮಾಲಕರ ಸಂಘ, ಹತ್ತಿ ಗಿರಣಿ ಮಾಲಕರ ಸಂಘ, ಮೊದಲಾಗಿ. ಇದೇ ರೀತಿ ಯಾವುದೇ ಸಂಸ್ಥೆಯಲ್ಲಿಯ ಅಧಿಕಾರಿಗಳು ತಮ್ಮ ಹಕ್ಕುಗಳ ರಕ್ಷಣೆಗೆ ಸಂಘಗಳನ್ನು ರಚಿಸಿ ಕೊಳ್ಳುತ್ತಾರೆ. ಉದಾ:- ಜೀವ ವಿಮಾ ಕಾರ್ಪೊರೇಶನ್ ಅಧಿಕಾರಿಗಳ ಸಂಘ ಮುಂತಾಗಿ. ಈ ಸಂಘಗಳಲ್ಲಿಯೂ ವಿವಿಧ ಸ್ಥಾನಗಳಿಗೆ ಚುನಾವಣೆಗಳು ನಡೆಯುತ್ತವೆ. ಇವುಗಳಲ್ಲಿಯೂ ಕೆಲವಡೆ ಹೊರಗಿನ ಪ್ರಭಾವೀ ವ್ಯಕ್ತಿಗಳನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡುವ ಪದ್ಧತಿ ಇದ್ದರೆ, ಕೆಲವು ಸಂಘಗಳಲ್ಲಿ ಸಂಘದ ಸದಸ್ಯರು ಮಾತ್ರ ವಿವಿಧ ಸ್ಥಾನಗಳಿಗೆ ಆಯ್ಕೆಯಾಗುತ್ತಾರೆ. ಹೀಗಾಗಿ ಈ ಮಾಲಕರ, ಅಧಿಕಾರಿಗಳ, ಸಂಘಗಳ ಚುನಾವಣೆಯಲ್ಲಿ ಯಶಸ್ಸು ಪಡೆಯಲು ಜಾತಕ ಎಂತಿರಬೇಕು? ಕಾರಕ ಗ್ರಹ, ಲಗ್ನ, ಸ್ಥಾನಾದಿಗಳಾವವು? ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :**-ಮಾಲಕ ವರ್ಗದ ಚುನಾವಣೆಗೆ ಕಾರಕಗ್ರಹ ಯಾವುದು ಎಂದು ವಿಶ್ಲೇಷಿಸುವುದು ತೊಡಕಿನದು. ಏಕೆಂದರೆ ಸ್ವತಂತ್ರ ಉದ್ಯೋಗಸ್ಥರಿಗೆ ನಿರ್ದಿಷ್ಟವಾದ ಗ್ರಹವೇ ಕಾರಕವೆಂದು ಹೇಳಲು ಬರುವಂತಿಲ್ಲ. ಏಕೆಂದರೆ ಅನೇಕ ಬಗೆಯ ಸ್ವತಂತ್ರ ಉದ್ಯೋಗಗಳಿಗೆ ವಿಭಿನ್ನ ಗ್ರಹಗಳು ಕಾರಕವೂ ಪೋಷಕವೂ ಇರುತ್ತವೆ. ಉದಾ : ಉಪಹಾರ, ಭೋಜನ, ವಸತಿ, ವೃತ್ತಿಗೆ ಅರ್ಥಾತ್ ಹೋಟಲು ವ್ಯಾಪಾರಸ್ಥರಿಗೆ ಅನ್ನ ಕಾರಕ ಗ್ರಹವಾದ ಚಂದ್ರನು ಕಾರಕನಿದ್ದರೆ, ಮುದ್ರಣ ವೃತ್ತಿದಾರರಿಗೆ ಬುಧ,ಶನಿಯರು ಕಾರಕರಿರುತ್ತಾರೆ. ಹಾಗೇ ಟಾಕೀಸ,ಗಿರಣಿ-ಚಾಳಿನ ಮಾಲಕರಿಗೆ ಚಂದ್ರ,ಶುಕ್ರ,ಶನಿಯರು ಕಾರಕರಿರುತ್ತಾರೆ. ಹೀಗೆ ವಿಭಿನ್ನ ವೃತ್ತಿಯ ಮಾಲಕರ ಅನೇಕ ಗ್ರಹಗಳು ಕಾರಕವಿರುತ್ತವೆ. ಇದೂ ಅಲ್ಲದೇ,

ಸ್ವತಂತ್ರ ಉದ್ಯೋಗಸ್ಥರಿಗೆ ನಿರ್ದಿಷ್ಟ ಗ್ರಹವೇ ಕಾರಕವೆಂದು ಹೇಳುವದ. ತೊಡಕಿನದು. ಏಕೆಂದರೆ, ರವಿ, ಮಂಗಳ, ಗುರುಗಳು ಅಧಿಕಾರಿ ಕಾರಕ ಗ್ರಹಗಳು, ಬುಧ, ಶನಿ, ಶುಕ್ರರು ಸೇವಾಕಾರಕ ಗ್ರಹಗಳು, ಪುರುಷ ರಾಶಿಯ ಚಂದ್ರನು ಅಧಿಕಾರೀ ಕಾರಕನೂ, ಸ್ತ್ರೀ ರಾಶಿಯ ಚಂದ್ರನು ಸೇವಾ ಕಾರಕನೂ ಇರುತ್ತಾನೆ.

ಸ್ವತಂತ್ರ ಉದ್ಯೋಗಸ್ಥರು ಅಧಿಕಾರವನ್ನು ಚಲಾಯಿಸುವ ಅಧಿಕಾರಿಗಳೂ ಹೌದು, ಸ್ವಂತ ದುಡಿಮೆ ಮಾಡುವ ಶ್ರಮ ಜೀವಿಗಳೂ ಹೌದು ಸೇವೆಯನ್ನು ಮಾಡುವ ಸೇವಕರೂ ಹೌದು, ಯಾರ ಹಂಗು ಇಲ್ಲದೆ ಸ್ವತಂತ್ರ ವೃತ್ತಿಯನ್ನು ಕೈಕೊಂಡ ಸರ್ವ ಸ್ವತಂತ್ರರೂ ಹೌದು. ಇಂಥ ಎಲ್ಲ ಬಗೆಯ ಉದ್ಯೋಗದ ಎಲ್ಲ ಗುಣಧರ್ಮದ ಕೆಲಸವನ್ನು ಕೈಕೊಳ್ಳುವ ಇಂಥ ಉದ್ಯೋಗಸ್ಥರ ಕಾರಕಗ್ರಹವಾವುದು ಎಂಬುದನ್ನು ನಿರ್ಧರಿಸುವದು ತೊಡಕಿನದು. ಆದುದರಿಂದ ಇಂಥ ಮಾಲಕರ ವರ್ಗದ ಚುನಾವಣೆಗೆ ಕಾರಕ ಗ್ರಹಗಳಿಗಿಂತ ಭಾವೇಶನ ಬಲಾಬಲ ಪರಿಶೀಲಿಸ ಬೇಕಾಗುತ್ತದೆ. ಉದಾ: ಸ್ವತಂತ್ರ ಉದ್ಯೋಗದ ಭಾವೇಶರೆಂದರೆ ಷಷ್ಟೇಶ, ಚತುರ್ಥೇಶ, ದ್ವಿತೀಯೇಶ, ಇವರ ಬಲಾಬಲವನ್ನು ಚುನಾವಣೆ ಕಾರಕ ಗ್ರಹವಾದ ರವಿಯೊಂದಿಗೆ ಪರಿಶೀಲಿಸಬೇಕಾಗುತ್ತದೆ ಆದರೆ ಅಧಿಕಾರೀ ವರ್ಗಗಳ ಸಂಘಗಳ ಚುನಾವಣೆಗೆ ಗುರು, ಮಂಗಳ, ಪುರುಷ ರಾಶಿಯ ಚಂದ್ರನೊಂದಿಗೆ ರವಿಯ ಬಲಾಬಲವನ್ನು ಪರಿಶೀಲಿಸಬೇಕು.

**ಕಾರಕ ಸ್ಥಾನ** :–ಮಾಲಕ ವರ್ಗದ ಚುನಾವಣೆಗೆ ಚತುರ್ಥ, ಷಷ್ಠ, ದ್ವಿತೀಯ, ದಶಮ, ಈ ಸ್ಥಾನಗಳನ್ನು ಚುನಾವಣೆ ಕಾರಕ ಸ್ಥಾನಗಳಾದ ಭಾಗ್ಯ–ಲಗ್ನದೊಂದಿಗೆ ಪರಿಶೀಲಿಸಬೇಕು. ಆದರೆ, ಅಧಿಕಾರೀ ವರ್ಗಗಳ ಚುನಾವಣೆಗೆ ಲಗ್ನ, ಪಂಚಮ, ಭಾಗ್ಯ ಸ್ಥಾನಗಳು ಕಾರಕವು.

**ಕಾರಕ ಲಗ್ನ** :–ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರು ಮಾಲಕ ವರ್ಗದವರ ಚುನಾವಣೆಗೂ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರು ಅಧಿಕಾರಿಗಳ ಚುನಾವಣೆಗೂ ಯಶ ದೊರಕಿಸುತ್ತಾರೆ.

**ರಾಶಿ** :- ನಿರ್ದಿಷ್ಟ ರಾಶಿಯವರೇ ಈ ಚುನಾವಣೆಯಲ್ಲಿ ಯಶ ಸಂಪಾದಿಸುವರೆಂದು ಹೇಳಲು ಬಾರದು.

---

೩

# ಚುನಾವಣೆಯ ಇತರ ಅಂಶಗಳು

ಚುನಾವಣೆ ರಾಜಕಾರಣಿಗಳ ಜೀವನದಲ್ಲಿ ಒಂದು ಮಹತ್ವದ ಘಟನೆ ಚುನಾವಣೆಯಲ್ಲಿಯ ಯಶ-ಅಪಯಶಗಳ ಮೇಲೆಯೇ ರಾಜಕಾರಣಿಗಳ ಏಳು-ಬೀಳು, ಏರಿಳಿತಗಳು ಆಧಾರ ಪಟ್ಟಿರುತ್ತವೆ.

ಚುನಾವಣೆಯನ್ನು ಮೂರು ಘಟ್ಟಗಳಲ್ಲಿ ವಿಶ್ಲೇಷಿಸಬಹುದು. (೧) ಚುನಾವಣಾ ಪೂರ್ವಘಟ್ಟ (೨) ಚುನಾವಣಾ ಕಾಲದ ಘಟ್ಟ (೩) ಚುನಾವಣಾ ನಂತರದ ಘಟ್ಟ. ಈ ಗ್ರಂಥದ ಪ್ರಥಮ ಪ್ರಕರಣವಾದ "ಚುನಾವಣಾ ಸಪ್ತಕ" ವಿಭಾಗದಲ್ಲಿ ಚುನಾವಣಾ ಕಾಲದಲ್ಲಿ ಬರುವ ಸಮಸ್ಯೆಗಳ ವಿಶ್ಲೇಷಣೆ ಹಾಗೂ ಪರಿಹಾರದ ಬಗ್ಗೆ ಚರ್ಚಿಸಲಾಗಿದೆ. "ಚುನಾವಣೆಯ ಇತರ ಅಂಶಗಳು" ಎಂಬ ಈ ವಿಭಾಗದಲ್ಲಿ ಚುನಾವಣೆಯ ಪೂರ್ವಕಾಲದ ಸಮಸ್ಯೆಗಳು ಹಾಗೂ ಚುನಾವಣೆಯ ನಂತರದ ಸಮಸ್ಯೆಗಳ ವಿಶ್ಲೇಷಣೆ ಮಾಡಲಾಗಿದೆ.

ಚುನಾವಣೆಯ ಪೂರ್ವ ಹಂತದಲ್ಲಿ ಸ್ಪರ್ಧೆಯಿಂದ ಯಶ ದೊರೆತೀತೆ ಎಂಬ ಒಂದೇ ಪ್ರಶ್ನೆ ಇರದೆ, ಅದಕ್ಕೆ ಸಂಬಂಧಿಸಿದ ಅನೇಕ ಪ್ರಶ್ನೆಗಳೂ ತಲೆ ಎತ್ತುತ್ತವೆ. ಭಾರತದ ರಾಜಕೀಯ ರಚನೆಯಲ್ಲಿ ಸ್ಪರ್ಧೆಗಾಗಿ ಸ್ಪರ್ಧೆ, ಎಂಬ ತಾತ್ವಿಕ ಆಧಾರದ ಮೇಲೆ ಸ್ಪರ್ಧಿಸುವವರೇ ಕಡಿಮೆ ಜನ ಇರುತ್ತಾರೆ. ರಾಜಕೀಯ ಚುನಾವಣೆಯಲ್ಲಿ ಸ್ಪರ್ಧಿಸುವ ಮುನ್ನ ಸ್ಪರ್ಧಾಳುಗಳು ಕೇಳುವ ಪ್ರಥಮ ಪ್ರಶ್ನೆ ಏನೆಂದರೆ, ಯಾವ ಪಕ್ಷದಿಂದ ಸ್ಪರ್ಧಿಸಿದರೆ, ತನಗೆ ಜಯ ದೊರೆತೀತು ? ಇದರಂತೆಯೇ ಅಧಿಕಾರಾರೂಢ ಪಕ್ಷ ಯಾವುದಿರುತ್ತದೆಯೋ ಅದರಿಂದ ಸ್ಪರ್ಧಿಸಲು ತಿಕೀಟು ದೊರೆತೀತೆ ? ಯಾವ ಪಕ್ಷದಿಂದ ತಮಗೆ ತಿಕೀಟು ದೊರೆತೀತು ? ಮೊದಲಾದ ಪ್ರಶ್ನೆಗಳ

ಪ್ರಾರಂಭವಾಗಿಸ್ಪರ್ಧೆಯಲ್ಲಿಯಪ್ರಕಾರದಬಗೆಗಳಾದನೇರಸ್ಪರ್ಧೆ,ತ್ರಿಕೋಣ ಸ್ಪರ್ಧೆ, ಬಹುಮುಖ ಸ್ಪರ್ಧೆ ಮೊದಲಾದ ಸ್ಪರ್ಧೆಯಲ್ಲಿಯ ಪ್ರಕಾರದ ಬಗೆಗೆ ಪ್ರಶ್ನಿಸಿ,ಆ ಬಳಿಕ ಆಯ್ಕೆಯ ರೀತಿಗಳಾದ, ಅವಿರೋಧ,ಬಹುಮತ, ಪ್ರಚಂಡ, ಅಲ್ಪಮತ, ಮೊದಲಾದ ಆಯ್ಕೆಯ ರೀತಿ, ಇವೇ ಮೊದಲಾದ ಚುನಾವಣಾ ಪೂರ್ವ ಘಟ್ಟದ ಸಮಸ್ಯೆಗಳಿಗೆ ಉತ್ತರ ಕೊಡಬೇಕಾಗುತ್ತ ವೆ.

ಚುನಾವಣಾ ನಂತರದ ಹಂತದಲ್ಲಿ ಬರುವ ಸಮಸ್ಯೆಗಳನ್ನು ಈ ವಿಭಾಗದಲ್ಲಿ ವಿಶ್ಲೇಷಿಸಲಾಗಿದೆ. ಚುನಾವಣೆಯಲ್ಲಿಯ ಗೆಲವು–ಸೋಲು ಅದರ ಪರಿಣಾಮವೇ ಅಂತಿಮವೆಂದು ನಿರ್ಣಯಿಸಲಾಗುವದಿಲ್ಲ. ಏಕೆಂದರೆ, ಚುನಾವಣಾ ತಂಟೆಯಾಗುವ ಸಂಭವಗಳೂ ಉಂಟು. ಇದಲ್ಲದೇ ಅಧಿಕಾರ ಹಸ್ತಾಂತರವಾಗುವ ಪ್ರಸಂಗಗಳು ಬಂದರೆ, ಪಕ್ಷಾಂತ ರದ ಬಗೆಗೆ ಸಮಸ್ಯೆಗಳು ಬರುತ್ತವೆ. ಆಗ ಯಾವ ಪಕ್ಷಕ್ಕೆ ಪಕ್ಷಾಂತರ ಮಾಡಲೆಂದು ಕೇಳುವ ಪ್ರಸಂಗಗಳೂ ಇಲ್ಲದಿಲ್ಲ. ಹೀಗಾಗಿ ಪಕ್ಷಾಂತರದ ಮುಖ್ಯ ಪ್ರಶ್ನೆಯನ್ನು ಅನೇಕರು ಕೇಳುತ್ತಾರೆ. ಇದಲ್ಲದೇ ವಿಧಾನಸಭೆ, ಅಥವಾ ಸಂಸತ್ತಿಗೆ ಆಯ್ಕೆ ಹೊಂದಿದವರೂ ತಾವು ಮಂತ್ರಿಗಳಾಗುವ ಸಂಭವವಿದೆಯೋ, ಆದರೆ ಯಾವ ಬಗೆಯ ಮಂತ್ರಿ? ಉಪಸಚಿವತ್ವವೊ ? ರಾಜ್ಯಸಭೆ ಸಚಿವತ್ವವೋ ? ಕ್ಯಾಬಿನೆಟ್ ದರ್ಜೆಯ ಸಚಿವತ್ವವೊ ? ಮೊದಲಾದ ಪ್ರಶ್ನೆಗಳನ್ನು ಕೇಳುತ್ತಿದ್ದರೆ, ನಗರ ಪಾಲಿಕೆಗೆ ಅಥವಾ ಮುನಸಿಪಾಲಿಟಿಗೆ, ಕಾರ್ಪೊರೇಶನ್ನಿಗೆ, ಮೊದಲಾದ ಸ್ಥಾನಿಕ, ಸಾಂಸ್ಕೃತಿಕ ಸಂಸ್ಥೆಗೆ ಆಯ್ಕೆಯಾದವರು ಮಹಾಪೌರ (ಮೇಯರ), ಉಪಮಹಾ ಪೌರ, ಅಧ್ಯಕ್ಷ, ಉಪಾಧ್ಯಕ್ಷ, ಸ್ಟಾಂಡಿಂಗ್ ಕಮೀಟಿ ಚೇರಮನ್ ಮೊದಲಾದ ಅಧಿಕಾರೀ ವರ್ಗದ ಪದವಿ ಪಡೆಯುವಿಕೆಗಾಗಿ ಸಮಸ್ಯೆಗಳಿರು ತ್ತವೆ. ಅಂದರೆ ಚುನಾವಣಾ ಫಲಿತಾಂಶ ಪ್ರಕಟವಾದನಂತರ ಯಶಸ್ವಿ ಯಾದವರಿಗೆ ಅಧಿಕಾರೀ ಸ್ಥಾನಗಳ ಬಗ್ಗೆ ತಮ್ಮ ಭವಿತವ್ಯ ಹೇಗಿದೆ ? ಎಂಬ ಚಿಂತೆ ಪ್ರಾರಂಭವಾಗುತ್ತದೆ. ಹೀಗಾಗಿ ಚುನಾವಣಾ ಪೂರ್ವದಲ್ಲಿ ಹಾಗೂ ನಂತರದಲ್ಲಿ ಬರುವ ಸಮಸ್ಯೆಗಳ ಜ್ಯೋತಿಷ್ಯ ಶಾಸ್ತ್ರದ ವಿಶ್ಲೇಷಣೆಯನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ.

### ೧) ಯಾವ ಪಕ್ಷದಿಂದ ಸ್ಪರ್ಧಿಸಬೇಕು ?

ಯಾವ ಪಕ್ಷಕ್ಕೆ ಸೇರಬೇಕು ? ಯಾವ ಪಕ್ಷದಿಂದ ಸ್ಪರ್ಧಿಸ ಬೇಕೆಂದು ಕೇಳುವವರಲ್ಲಿ ಕೊರತೆ ಇಲ್ಲ. ತಮ್ಮ ತತ್ವಗಳಿಗನುಗುಣ- ವಾಗಿ ಪಕ್ಷ ಸೇರಬೇಕೆಂಬುವದಕ್ಕಿಂತ ಹೆಚ್ಚಾಗಿ ಯಾವ ಪಕ್ಷ ಸೇರಿದರೆ ಯಶ ದೊರಕೀತು? ರಾಜಕೀಯದಲ್ಲಿ ಸ್ಥಾನ, ಮಾನ ದೊರೆತೀತು ? ಎಂಬ ಸಮಸ್ಯೆಯನ್ನೇ ಹೆಚ್ಚು ಪ್ರಾಮುಖ್ಯವಾಗಿ ಕೇಳಲಾಗುತ್ತದೆ. ಈ ಪ್ರಶ್ನೆಗೆ ಉತ್ತರಿಸುವದು ಕಠಿಣವಾಗಿರುತ್ತದೆ. ಅದರಲ್ಲಿಯೂ ವಿವಿಧ ರಾಜಕೀಯ ಧೋರಣೆಯುಳ್ಳ ಅಸಂಖ್ಯಾತ ಪಕ್ಷಗಳು ಇರುವ ಭಾರತದ ರಾಜ- ಕೀಯ ಚೌಕಟ್ಟಿನಲ್ಲಿ ಹೇಳುವದಂತೂ ಬಹಳ ಕಷ್ಟ. ಆದರೆ, ಜಗತ್ತಿನ ಎಲ್ಲ ರಾಜಕೀಯ ಪಕ್ಷಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಅವೆಂದರೆ ಎಡ, ಬಲ, ಹಾಗೂ ಮಧ್ಯಮ. ಪ್ರಗತಿಪರ ರಾಜಕೀಯ ಧೋರಣೆಗಳುಳ್ಳ ರಾಜಕೀಯ ಪಕ್ಷಗಳನ್ನು ಎಡ (Revolutionary) ಪಕ್ಷಗಳೆಂದೂ, ಪ್ರತಿಗಾಮಿ ರಾಜಕೀಯ ಧೋರಣೆಗಳುಳ್ಳ ರಾಜಕೀಯ ಪಕ್ಷಗಳನ್ನು ಬಲ (Reactionary) ಪಕ್ಷಗಳೆಂದೂ, ಪ್ರಗತಿಪರ ವಿಚಾರಗಳನ್ನು ಹೊಂದಿದ್ದರೂ ಸೌಮ್ಯ ರಾಜಕೀಯ ಕ್ರಿಯೆಯಿಂದ ಈ ಗುರಿಗಳನ್ನು ಸಾಧಿಸಬಯಸಿದ ರಾಜಕೀಯ ಪಕ್ಷಗಳಿಗೆ ಮಧ್ಯಮ ಪಕ್ಷಗಳೆಂದೂ ಹೇಳಬಹುದು. ಇದಲ್ಲದೇ ಎಡ ಪಕ್ಷಗಳಲ್ಲಿಯೂ ಎಡ- ಎಡ, ಎಡ-ಬಲ, ಎಡ-ಮಧ್ಯಮ, ಇರುವಂತೆ, ಬಲ ಪಕ್ಷಗಳಲ್ಲಿಯೂ ಬಲ-ಬಲ, ಬಲ-ಎಡ, ಬಲ-ಮಧ್ಯಮ, ಇದರಂತೆ ಮಧ್ಯಮ ಪಕ್ಷಗಳಲ್ಲಿ ಮಧ್ಯಮ-ಎಡ, ಮಧ್ಯಮ--ಬಲ, ಮಧ್ಯಮ-ಮಧ್ಯಮ ಧೋರಣೆ ಗಳುಳ್ಳವರೂ ಉಂಟು. ಇದು ಪಕ್ಷಗಳ ಧೋರಣೆಯಿಂದ ತಿರ್ಮಾನಿ- ಸಬಹುದು. ಅಂತೆಯೇ ಆಯಾ ಪಕ್ಷಗಳಿಗೆ ಸೇರಿದವರ ವಿಚಾರ ಧೋರಣೆಯ ಮೇಲೆ ಅವರು ಎಡ ರಾಜಕೀಯ ಪಕ್ಷದಲ್ಲಿದ್ದರೂ ಬಲ ಧೋರಣೆಯನ್ನು ತಳೆದಿರಬಹುದು. ಬಲ ರಾಜಕೀಯ ಪಕ್ಷದಲ್ಲಿದ್ದರೂ ಎಡ ಧೋರಣೆಯನ್ನು ತಾಳಬಹುದು. ಈ ಎಲ್ಲ ರಾಜಕೀಯ ಬಣ್ಣಗಳಿಗೆ ಜ್ಯೋತಿಷ್ಯ ಶಾಸ್ತ್ರ ಏನು ಹೇಳುತ್ತದೆ ? ಅಭ್ಯರ್ಥಿಯ ಜಾತಕದ ಬಲಾ ಬಲದ ಮೇಲೆ ಗ್ರಹಗಳ ಯೋಗಗಳ ಮೇಲೆ ಆಯಾ ಅಭ್ಯರ್ಥಿ,

ಆಯಾ ಜಾತಕ, ಆಯಾ ಪಕ್ಷಗಳಿಂದ ಸ್ಪರ್ಧಿಸಿದ್ದಲ್ಲಿ ಯಶ ಲಭಿಸುತ್ತದೆ ಎಂದು ಹೇಳಬಹುದು. ಇವುಗಳ ವಿವರಣೆಯನ್ನು ಈ ಕೆಳಗೆ ವಿವೇಚಿಸಲಾಗಿದೆ.

**ಕಾರಕ ಗ್ರಹ** :—ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಎಡ ಪಕ್ಷದ ಧೋರಣೆಗಳ ವಿಚಾರ ಹೊಂದುವ ಕಾರಕ ಗ್ರಹವೆಂದರೆ ಶನಿಯು. ಶನಿಯು ಬಲಾಢ್ಯನಿರದೇ ಯಾರೂ ಎಡ ಪಕ್ಷಗಳ ರಾಜಕೀಯ ಸಂಸ್ಥೆಗಳಲ್ಲಿ ಸೇರಲಾರರು, ಹಾಗೂ ಆ ಸಂಸ್ಥೆಗಳಲ್ಲಿ ಅವರು ಉತ್ಕರ್ಷ ಹೊಂದಲಾರರು. ಆದುದರಿಂದ ಎಡ ಪಕ್ಷಗಳ ಮುಖಾಂತರ ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ಜಾತಕದಲ್ಲಿ ರಾಜಕೀಯ ಹಾಗೂ ಚುನಾವಣೆಯ ಕಾರಕ ಗ್ರಹವಾದ ರವಿಯೊಂದಿಗೆ ಎಡ ಪಕ್ಷಗಳ ಕಾರಕ ಗ್ರಹವಾದ ಶನಿಯು ಬಲಾಢ್ಯನಿರಬೇಕು.

ಬಲ ಪಕ್ಷ ಧೋರಣೆಗಳ ವಿಚಾರದ ಕಾರಕ ಗ್ರಹವೆಂದರೆ ಗುರುವು. ಗುರುವು ಬಲಾಢ್ಯನಿರದೇ ಯಾರೂ ಬಲ ಪಕ್ಷಗಳ ರಾಜಕೀಯ ಸಂಸ್ಥೆಗಳಲ್ಲಿ ಸೇರಲಾರರು. ಹಾಗೂ ಅಲ್ಲಿ ಉತ್ಕರ್ಷ ಹೊಂದಲಾರರು. ಇದರಂತೆ, ಬಲ ಪಕ್ಷಗಳ ಮುಖಾಂತರ ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ಜಾತಕದಲ್ಲಿ ರಾಜಕೀಯ ಹಾಗೂ ಚುನಾವಣೆಯ ಕಾರಕ ಗ್ರಹವಾದ ರವಿಯೊಂದಿಗೆ ಬಲ ಪಕ್ಷಗಳ ಧೋರಣೆಗಳ ಕಾರಕ ಗ್ರಹವಾದ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

ಜಾತಕದಲ್ಲಿ ಮಂಗಳನು ಬಲಾಢ್ಯನಿದ್ದರೆ ಸರ್ವಾಧಿಕಾರೀ ಪ್ರವೃತ್ತಿಯವನಾಗಿರುತ್ತಾನೆ. ಇದರಂತೆ, ರವಿ–ಮಂಗಳರು ಬಲಾಢ್ಯರಿರುವ ವ್ಯಕ್ತಿಗಳು ಎಡ ಪಕ್ಷದವರೇ ಇರಲಿ, ಬಲ ಪಕ್ಷದವರೇ ಇರಲಿ, ಸಂಸ್ಥೆಯಲ್ಲಿಯೂ ಸರಕಾರದಲ್ಲಿಯೂ ಸರ್ವಾಧಿಕಾರೀ ಮನೋವೃತ್ತಿಯುಳ್ಳವರಿರುತ್ತಾರೆ.

ಬುಧ, ಶುಕ್ರರು ಮಧ್ಯಮ ಪಕ್ಷದ ಧೋರಣೆಗಳ ಕಾರಕ ಗ್ರಹಗಳು. ಮಧ್ಯಮವಾದಿ ರಾಜಕೀಯ ಪಕ್ಷಗಳಿಂದ ಸ್ಪರ್ಧಿಸಬೇಕೆಂಬುವವರಿಗೆ ರವಿ, ಬುಧ, ಶುಕ್ರರು ಪೋಷಕರಿರಬೇಕು.

ಚಂದ್ರನು ಪಕ್ಷಾಂತರ ಪೋಷಕ ಕಾರಕನು. ಜಾತಕದಲ್ಲಿ ಚಂದ್ರನು ದೂಷಿತನಿದ್ದರೆ ಅಥವಾ ಯೋಗಕಾರಕನಿದ್ದು, ಬಲಾಢ್ಯನಿದ್ದರೆ ಇಂಥ ಜಾತಕರು ಮೇಲಿಂದ ಮೇಲೆ ಪಕ್ಷಾಂತರವಾಗುತ್ತಾರೆ.

ಪಕ್ಷಾಂತರದ ವಿಷಯಕ್ಕಾಗಿ ಇದೇ ಪ್ರಕರಣದಲ್ಲಿ ಪ್ರತ್ಯೇಕವಾಗಿ ಸುದೀರ್ಘವಾಗಿ ಚರ್ಚಿಸಲಾಗಿದೆ.

ಇನ್ನು ಬಲ ಪಕ್ಷಗಳಲ್ಲಿದ್ದು, ಎಡ ಪಕ್ಷಗಳ ಧೋರಣೆಗಳ ವಿಚಾರ ಹೊಂದಿದಂಥವರ ಜಾತಕದಲ್ಲಿ ಗುರುವಿಗಿಂತ ಶನಿಯೇ ಬಲಾಢ್ಯನಿರುತ್ತಾನೆ. ಅಥವಾ ಗುರುವು ಕೇವಲ ರಾಶಿ ಬಲದವನಿದ್ದು, ಶನಿಯು ಸ್ಥಾನ ಬಲದವನೂ ರಾಶಿ ಬಲದವನೂ ಇರುತ್ತಾನೆ. ಇದರಂತೆ ಜಾತಕನು ಎಡ ಪಕ್ಷದಲ್ಲಿದ್ದು, ಬಲ ಪಕ್ಷಗಳ ಧೋರಣೆಗಳ ವಿಚಾರ ಹೊಂದಿದಂಥವರ ಜಾತಕದಲ್ಲಿ ಶನಿಗಿಂತ ಗುರುವೇ ಬಲಾಢ್ಯನಿರುತ್ತಾನೆ. ಅಥವಾ ಶನಿಯು ಕೇವಲ ರಾಶಿ ಬಲದವನಿದ್ದು, ಗುರುವು ಸ್ಥಾನಬಲದವನೂ ರಾಶಿಬಲದವನೂ ಇರುತ್ತಾನೆ. ಹೀಗೆ ವಿಭಿನ್ನ ವಿಚಾರದ ಧೋರಣೆಗಳ ವಿರುದ್ಧವಿರುವ ಸಂಸ್ಥೆಗಳಲ್ಲಿ ಬಹಳ ದಿನಗಳವರೆಗೆ ಮುಂದುವರಿಯುವದು ಕಠಿಣವಾಗುತ್ತದೆ.

**ಕಾರಕ ಲಗ್ನ:—** ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ ಈ ಏಳು ಲಗ್ನಗಳು ಎಡಪಕ್ಷ ಧೋರಣೆಗಳಿಗೆ ಪೂರಕವಾಗಿರುವ ಲಗ್ನಗಳಿರುತ್ತವೆ.

ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ, ಮೀನ ಈ ಒಂಬತ್ತು ಲಗ್ನಗಳು ಬಲಪಕ್ಷ ಧೋರಣೆಗಳ ಕಾರಕ ಲಗ್ನಗಳಿರುತ್ತವೆ.

ವೃಷಭ, ಮಿಥುನ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಏಳು ಲಗ್ನಗಳು ಮಧ್ಯಮ ಪಕ್ಷಗಳ ಧೋರಣೆಗಳ ಪೋಷಕ ಲಗ್ನಗಳಿರುತ್ತವೆ.

ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಈ ಐದು ಲಗ್ನಗಳು ಸರ್ವಾಧಿಕಾರಿ ಪ್ರವೃತ್ತಿಯ ಪೋಷಕ ಲಗ್ನಗಳಿರುತ್ತವೆ.

**ಸ್ಥಾನ:**— ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ, ಚತುರ್ಥ, ದ್ವಿತೀಯ, ಷಷ್ಠ, ಭಾಗ್ಯ ಇವು ಬಲಪಕ್ಷ ಧೋರಣೆಯ ಕಾರಕ ಸ್ಥಾನಗಳಿರುತ್ತವೆ.

ಲಗ್ನ. ಪಂಚಮ, ತೃತೀಯ, ದಶಮ, ಇವು ಎಡಪಕ್ಷ ಧೋರಣೆಯ ಕಾರಕ ಸ್ಥಾನಗಳಿರುತ್ತವೆ.

ಲಗ್ನ, ತೃತೀಯ, ದಶಮ ಇವು ಸರ್ವಾಧಿಕಾರೀ ಪ್ರವೃತ್ತಿಯ ಪೋಷಕ ಸ್ಥಾನಗಳಿರುತ್ತವೆ.

ಲಗ್ನ, ಚತುರ್ಥ, ಪಂಚಮ, ತೃತೀಯ ಇವು ಮಧ್ಯಮ ಪಕ್ಷದ ಕಾರಕ ಸ್ಥಾನಗಳಿರುತ್ತವೆ.

**ರಾಶಿ:**—ನಿರ್ದಿಷ್ಟ ರಾಶಿಯವರೇ ಎಡ, ಬಲ, ಮಧ್ಯಮ,ಸರ್ವಾಧಿಕಾರಿ ಧೋರಣೆಗಳ ಕಾರಕ ರಾಶಿಗಳಿರುತ್ತವೆ ಎಂದು ನಿರ್ದಿಷ್ಟವಾಗಿ ಹೇಳಲು ಬಾರದಿದ್ದರೂ ಮೇಷ, ಸಿಂಹ, ವೃಶ್ಚಿಕ, ಮಕರ, ಧನು ಈ ರಾಶಿಯವರು ಬಲ ಪಕ್ಷದ ವಿಚಾರದವರೂ; ಮಿಥುನ, ತುಲಾ, ಕುಂಭ, ಕರ್ಕ, ಮೀನ, ಇವರು ಎಡ ಪಕ್ಷದ ವಿಚಾರದವರೂ; ವೃಷಭ, ಮಿಥುನ, ಕರ್ಕ, ಕನ್ಯಾ ಮೀನ, ಇವರು ಮಧ್ಯಮ ಪಕ್ಷದ ವಿಚಾರದವರೂ; ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ಇವರು ಸರ್ವಾಧಿಕಾರಿ ಪ್ರವೃತ್ತಿಯ ಧೋರಣೆಗಳುಳ್ಳವರೂ ಹೆಚ್ಚಾಗಿರುವುದು ಕಂಡು ಬರುತ್ತದೆ.

**೨) ತಿಕೀಟು ದೊರೆಯುಬಹುದೇ ?**

ರಾಜಕೀಯ ರಂಗದಲ್ಲಿ ಕೆಲ ಪಕ್ಷಗಳು ಕೆಲ ಕಾಲದಲ್ಲಿ, ಕೆಲ ಕಾಲದವರೆಗೆ, ಬಲಿಷ್ಟವೂ ಕೆಲ ಪಕ್ಷಗಳು ನಿರ್ಬಲವೂ ಇರುತ್ತವೆ. ಪ್ರಬಲ ರಾಜಕೀಯ ಪಕ್ಷದ ಉಮೇದವಾರರಾಗಿ ಅಥವಾ ಅಧಿಕಾರಾರೂಢ ಪಕ್ಷದ

ತಿಕೀಟು ಪಡೆದು ಅರ್ಥಾತ್ ಅನುಮತಿ ಪಡೆದು ಚುನಾವಣೆಗೆ ಸ್ಪರ್ಧಿಸಬೇಕೆಂಬ ಬಯಕೆ ಸಾಮಾನ್ಯವಾಗಿ ಎಲ್ಲರಲ್ಲಿಯೂ ಇರುತ್ತದೆ. ಇದು ಸ್ವಾಭಾವಿಕವೂ ಹೌದು. ಇದರಿಂದಾಗಿ ಆಯಾ ಅಭ್ಯರ್ಥಿ ನಿರ್ದಿಷ್ಟವಾದ ಆಯಾ ಪಕ್ಷದಿಂದ ಚುನಾವಣೆಗೆ ಸ್ಪರ್ಧಿಸಲು ಅನುಮತಿ ಪಡೆಯುವದು ಅರ್ಥಾತ್ ಆಯಾ ಪಕ್ಷದ ತಿಕೀಟು ದೊರೆಯುವದು ಅತೀ ಮಹತ್ವದ ಪ್ರಶ್ನೆಯಾಗಿದೆ. ಹೀಗಾಗಿ ಚುನಾವಣೆಯ ವಿಷಯ ವಿಶ್ಲೇಷಿಸುವ, ಪ್ರಪ್ರಥಮ ಅಂಶ ಹಾಗೂ ಉಮೇದವಾರನ ಪ್ರಪ್ರಥಮ ಸಮಸ್ಯೆಯಾದ ತಿಕೀಟಿನ ವಿಷಯಕ್ಕೆ ಜ್ಯೋತಿಷ್ಯದ ವಿಚಾರವೇನು? ಯಾವ ಗ್ರಹಯೋಗವಿದ್ದರೆ ಆಯಾ ಅಭ್ಯರ್ಥಿಗೆ ಅವರವರ ಇಚ್ಛಾನುಸಾರ ಪಕ್ಷದ ತಿಕೀಟ, ಅನುಮತಿ ದೊರೆಯಬಹುದು ಎಂಬುದನ್ನು ಪರಿಶೀಲಿಸುವಾ.

(೧) ಚಂದ್ರನು ಬಲಾಢ್ಯನಿದ್ದ ಜಾತಕನಿಗೆ ಪಕ್ಷದ ತಿಕೀಟಿನ ಸಮಸ್ಯೆ ಉದ್ಭವಿಸುವದಿಲ್ಲ.

(೨) ಚತುರ್ಥಸ್ಥಾನ, ಚತುರ್ಥೇಶ, ಚಂದ್ರ, ಈ ಮೂರು ಸಂಗತಿಗಳು ಪೋಷಕವಿರುವ ಜಾತಕನಿಗೆ ಪಕ್ಷದಮುಖಾಂತರ ಚುನಾವಣೆಗೆ ಸ್ಪರ್ಧಿಸಲು ಸುಲಭ ಅನುಮತಿ ದೊರೆಯುತ್ತದೆ. ಇಷ್ಟೇ ಅಲ್ಲ, ಅನೇಕ ಪಕ್ಷಗಳು ತಮ್ಮ ತಮ್ಮ ಪಕ್ಷಗಳ ಮುಖಾಂತರ ಚುನಾವಣೆಗೆ ಸ್ಪರ್ಧಿಸಬೇಕೆಂದು ಒತ್ತಾಯಿಸುತ್ತವೆ. ಇಂಥ ಜಾತಕನಿಗೆ ಪಕ್ಷವು ತಿಕೀಟು ಕೊಡಬಹುದೇ? ಎಂಬ ಪ್ರಶ್ನೆಯಿರದೆ, ಯಾವ ಪಕ್ಷದ ವತಿಯಿಂದ ಸ್ಪರ್ಧಿಸಬೇಕೆಂದು ಚಿಂತೆ ಇರುತ್ತದೆ.

(೩) ಗುರು, ಶುಕ್ರ, ಚಂದ್ರ ಈ ಮೂರರಲ್ಲಿ ಯಾರೊಬ್ಬರು ಬಲಾಢ್ಯನಾಗಿ ಚತುರ್ಥದಲ್ಲಿದ್ದರೆ, ಅಂಥ ಜಾತಕನಿಗೆ ಆಯಾ ಪಕ್ಷದ ಮುಖಾಂತರ ಚುನಾವಣೆಗೆ ನಿಲ್ಲಲು ಪಕ್ಷವು ಅನುಮತಿ ನೀಡಲು ಯಾವ ತೊಂದರೆಯೂ ಉಂಟಾಗಲಾರದು.

(೪) ಅನೇಕ ಗ್ರಹಗಳು ಚತುರ್ಥದಲ್ಲಿದ್ದರೆ, ಅಥವಾ ಪಾಪಗ್ರಹಗಳು ಚತುರ್ಥದಲ್ಲಿದ್ದರೆ, ಅದರಲ್ಲಿಯೂ ರಾಹು, ಮಂಗಳರು ಚತುರ್ಥದಲ್ಲಿದ್ದರೆ, ಇಂಥ ಅಭ್ಯರ್ಥಿಗೆ ಪಕ್ಷದಿಂದ ತಿಕೀಟು ದೊರೆಯುವದು ಕಠೀಣವಾಗುತ್ತದೆ.

(೫) ಮಂಗಳನು ಚತುರ್ಥದಲ್ಲಿದ್ದು, ಚತುರ್ಥೇಶ ನಿರ್ಬಲನಿದ್ದ ವ್ಯಕ್ತಿಗೆ ಪಕ್ಷವು ತಿಕೀಟು ಕೊಡುವಲ್ಲಿ ಹಿಂದೆ ಮುಂದೆ ನೋಡುತ್ತದೆ.

(೬) ರವಿ, ಮಂಗಳ, ರಾಹು, ಕೇತು, ಶನಿ ಈ ಐದರಲ್ಲಿ ಯಾವುದೇ ಎರಡು ಗ್ರಹಗಳು ಚತುರ್ಥ, ಲಗ್ನ, ದಶಮ, ಈ ಯಾವುದೊಂದು ಸ್ಥಾನಗಳಲ್ಲಿಧ್ಧರೂ ಚುನಾವಣೆಗೆ ಯಾವದೇ ಪಕ್ಷದಿಂದ ತಿಕೀಟು ಪಡೆಯಲು ಹೋರಾಡಬೇಕಾಗುತ್ತದೆ.

(೭) ಮೇಷ, ಕರ್ಕ, ತುಲಾ, ವೃಷ್ಚಿಕ, ಮೀನ ಈ ಲಗ್ನಗಳಿದ್ದು ಚಂದ್ರನು ಬಲಾಢ್ಯನಿದ್ದ ಜಾತಕನಿಗೆ ಆಯಾ ಪಕ್ಷದ ಮುಖಾಂತರ ಸ್ಪರ್ಧಿ-ಸಲು ಪಕ್ಷವು ಅನುಮತಿ ನೀಡುತ್ತದೆ, ಅರ್ಥಾತ್ ತಿಕೀಟಿನ ಪ್ರಶ್ನೆ ಉದ್ಭವಿಸುವದಿಲ್ಲ.

(೮) ಮಿಥುನ, ಕರ್ಕ, ವೃಷಭ, ತುಲಾ, ಮಕರ, ಕುಂಭ ಈ ಲಗ್ನಗಳಿದ್ದು, ಶುಕ್ರನು ಬಲಾಢ್ಯನಿದ್ದ ಜಾತಕನಿಗೆ ಆಯಾ ಪಕ್ಷದ ಮುಖಾಂತರ ಸ್ಪರ್ಧಿಸಲು ಪಕ್ಷವು (ಅನುಮತಿ) ತಿಕೀಟು ನೀಡುತ್ತದೆ.

(೯) ಮೇಷ, ಮಿಥುನ, ಕರ್ಕ, ಸಿಂಹ, ಕನ್ಯಾ, ಧನು, ಮೀನ ಈ ಲಗ್ನಗಳಿದ್ದು ಗುರುವು ಬಲಾಢ್ಯನಿದ್ದ ಜಾತಕನಿಗೆ ಆಯಾ ಪಕ್ಷದ ಮುಖಾಂತರ ಸ್ಪರ್ಧಿಸಲು ಪಕ್ಷವು ಅನುಮತಿ ನೀಡುತ್ತದೆ.

(೧೦) ಮೇಷ, ವೃಷಭ, ಕರ್ಕ, ಸಿಂಹ, ವೃಷ್ಚಿಕ, ಧನು ಈ ಲಗ್ನ ಗಳಿದ್ದು, ರವಿಯು ನಿರ್ಬಲನಿದ್ದ ಜಾತಕನಿಗೆ ಆಯಾ ಪಕ್ಷದ ಮತಿಯಿಂದ ಸ್ಪರ್ಧಿಸಲು, ಅರ್ಥಾತ್ ಅನುಮತಿ ಪಡೆಯಲು ಬಹಳ ಕಠಿಣವಾಗುತ್ತದೆ.

(೧೧) ಮೇಷ, ಕರ್ಕ, ಸಿಂಹ, ವೃಷ್ಚಿಕ, ಮಕರ ಈ ಲಗ್ನಗಳಿದ್ದು, ಮಂಗಳನು ನಿರ್ಬಲನಿದ್ದ ಜಾತಕನಿಗೆ ಆಯಾ ಪಕ್ಷದ ಮತಿಯಿಂದ ಸ್ಪರ್ಧಿಸಲು ಅರ್ಥಾತ್ ಅನುಮತಿ ಪಡೆಯಲು ಪ್ರಯಾಸ ಎನಿಸುತ್ತದೆ.

(೧೨) ವೃಷಭ, ಮಿಥುನ, ತುಲಾ, ವೃಷ್ಚಿಕ, ಮಕರ, ಕುಂಭ, ಈ ಲಗ್ನಗಳಿದ್ದು, ಶನಿಯು ನಿರ್ಬಲನಿದ್ದ ಜಾತಕನಿಗೆ ಯಾವುದೇ ಪಕ್ಷದ

ವತಿಯಿಂದ ಸರ್ಧಿಸಲು, ತಿಕೀಟು ಪಡೆಯಲು, ಬಹಳ ದುಸ್ತರ ಎನಿಸುತ್ತದೆ.

(೧೨) ಲಗ್ನ (ತನು ಸ್ಥಾನ), ಲಗ್ನೇಶ, ಚತುರ್ಥಸ್ಥಾನ, ಚತುರ್ಥೇಶ ಚಂದ್ರ ಈ ಐದು ಸಂಗತಿಗಳಲ್ಲಿ ಯಾವದೇ ಮೂರು ಸಂಗತಿಗಳು ಪೋಷಕ ವಿರುವ ಜಾತಕನಿಗೆ ಪಕ್ಷದ ವತಿಯಿಂದ ಸ್ಪರ್ಧಿಸುವದು ಸಮಸ್ಯೆ ಯಾಗಲಾರದು.

(೧೪) ಜಾತಕದಲ್ಲಿ ಲಗ್ನೇಶ, ಚತುರ್ಥೇಶರು ಬಲಾಢ್ಯರಿದ್ದು, ಯಾರೊಬ್ಬರ ಮಹರ್ದಶೆ, ಅಂತರ್ದಶೆ, ಇದ್ದ ಕಾಲದಲ್ಲಿ ಪಕ್ಷದ ವತಿ ಯಿಂದ ಸ್ಪರ್ಧಿಸಲು ತೊಂದರೆ ಉಂಟಾಗಲಾರದು.

(೧೫) ಲಗ್ನ, ಚತುರ್ಥ, ಸ್ಥಾನಗಳಲ್ಲಿ ಬಲಾಢ್ಯ ಗ್ರಹವಿದ್ದು, ಆ ಗ್ರಹದ ಮಹರ್ದಶೆ, ಅಂತರ್ದಶೆಗಳ ಕಾಲದಲ್ಲಿಯೂ ಕೂಡಾ ಯಾವುದೇ ಪಕ್ಷದ ವತಿಯಿಂದ ಸ್ಪರ್ಧಿಸಲು ದುಸ್ತರವೆನಿಸಲಾರದು.

(೧೬) ಗೋಚರಿಯಿಂದ ಗುರು, ಶನಿಯರು ಅನುಕೂಲರಿದ್ದ ಕಾಲದಲ್ಲಿ ಪಕ್ಷದ ವತಿಯಿಂದ ಸ್ಪರ್ಧಿಸಲು ತೊಂದರೆ ಉಂಟಾಗುವದಿಲ್ಲ.

(೧೭) ರವಿ, ಮಂಗಳ, ಚಂದ್ರ, ಈ ಗ್ರಹಗಳು ಲಗ್ನ, ಚತುರ್ಥ, ದಲ್ಲಿದ್ದು, ಗೋಚರಿಯ ಶನಿಯ ಪರಿಭ್ರಮಣ ಇವರ ಮೇಲಿಂದಾಗುತಿದ್ದಾಗ ಪಕ್ಷದ ವತಿಯಿಂದ ತಿಕೀಟು ಪಡೆಯುವದು ದುಸ್ತರವಾಗುತ್ತದೆ.

### ೩) ಸ್ಪರ್ಧೆ ಹೇಗಾಗುತ್ತದೆ ?

ಚುನಾವಣೆಯ ಪೂರ್ವದ ಹಂತದಲ್ಲಿ ಅಭ್ಯರ್ಥಿಗಳು ಕೇಳಲಿರುವ ಮೂರನೇಯ ಪ್ರಶ್ನೆ ಎನೆಂದರೆ, ಸ್ಪರ್ಧೆ ಹೇಗಾಗುತ್ತದೆ. ? ನೇರ ಸ್ಪರ್ಧೆಯೋ ? ತ್ರಿಕೋನ ಸ್ಪರ್ಧೆಯೋ ? ಬಹುಮುಖ ಸ್ಪರ್ಧೆ ಯಾಗುವದೋ ? ಇವೇ ಮೊದಲಾದ ಸ್ಪರ್ಧೆಯ ಬಗೆಗಳ ಕುರಿತು ವಿಚಾರಿಸಲಾಗುತ್ತದೆ. ಯಾವ ಬಗೆಯ ಸ್ಪರ್ಧೆ ನಡೆದರೆ ಯಾವ

ಜಾತಕನಿಗೆ ಅನುಕೂಲವೆಂಬುವದನ್ನು ನಿರ್ಧರಿಸಬೇಕಾದಾಗ, ಜಾತಕದ ವಿಶ್ಲೇಷಣೆ ಹಾಗೂ ಚುನಾವಣೆಯ ವೇಳೆಗಳನ್ನು ಪರಿಶೀಲಿಸಬೇಕಾಗುತ್ತದೆ. ಚುನಾವಣೆಯ ಫಲಾಫಲದ ಸಿದ್ಧಾಂತದಲ್ಲಿ ಈ ಅಂಶವೂ ಕೂಡ ಬಹಳ ಮಹತ್ವಪೂರ್ಣ ಇರುವದರಿಂದ ಈ ಅಂಶದ ವಿಷಯಕ್ಕಾಗಿ ಜ್ಯೋತಿಷ್ಯದ ವಿಚಾರವೇನು ? ಗ್ರಹಯೋಗ ಎಂತಿರಬೇಕೆಂಬುವದನ್ನು ಪರಿಶೀಲಿಸೋಣ.

೧) ಸ್ಪರ್ಧೆಯ ವಿಷಯಕ್ಕಾಗಿ ಜಾತಕದ ಷಷ್ಠ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಜಾತಕದ ಷಷ್ಠ ಸ್ಥಾನ, ಷಷ್ಠೇಶರು ಬಲಾಢ್ಯರಿದ್ದರೆ ಅಂಥ ಜಾತಕನಿಗೆ ಸ್ಪರ್ಧೆಯ ಸಮಸ್ಯೆ ಉಂಟಾಗದು.

೨) ಜಾತಕದ ಷಷ್ಠ ಸ್ಥಾನದಲ್ಲಿ ಬಲಾಢ್ಯ ಮಂಗಳ, ರವಿ, ಶನಿ ಈ ಗ್ರಹಗಳಲ್ಲಿ ಯಾವುದೊಂದಿದ್ದರೆ, ಅಂಥ ಅಭ್ಯರ್ಥಿಗೆ ನೇರ, ತುರುಸಿನ ಸ್ಪರ್ಧೆ ಇರುತ್ತದೆ.

೩) ಬುಧ, ಗುರುಗಳು ಬಲಾಢ್ಯರಾಗಿ ಷಷ್ಠದಲ್ಲಿದ್ದರೆ, ಅಂಥ ಅಭ್ಯರ್ಥಿಯು ತ್ರಿಕೋಣ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

೪) ಶುಕ್ರ, ಚಂದ್ರರು ಷಷ್ಠದಲ್ಲಿದ್ದ ಅಭ್ಯರ್ಥಿಗೆ ಬಹುಮುಖ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

೫) ಚತುರ್ಥ, ಷಷ್ಠದಲ್ಲಿ ಅನೇಕ ಗ್ರಹಗಳಿದ್ದರೆ, ಅಥವಾ ಅನೇಕ ಪಾಪಗ್ರಹಗಳಿದ್ದರೆ, ನೇರ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

೬) ಮಿಥುನ, ಸಿಂಹ, ಕನ್ಯಾ, ವೃಶ್ಚಿಕ, ಮೀನ ಈ ಲಗ್ನದವರು ನೇರ ಹಾಗೂ ತುರುಸಿನ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

೭) ಮೇಷ, ಕರ್ಕ, ತುಲಾ, ಮಕರ ಈ ಲಗ್ನದವರು ಹೆಚ್ಚಾಗಿ ತ್ರಿಕೋಣ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

೮) ವೃಷಭ, ಧನು, ಕುಂಭ ಈ ಲಗ್ನದವರು ಬಹುಮುಖ ಸ್ಪರ್ಧೆಯಲ್ಲಿ ಹೋರಾಡ ಬೇಕಾಗುವದು.

೯) ಗೋಚರಿಯಿಂದ ಸಾಡೆಸಾತಿ, ಪಂಚಮಾಷ್ಟಮ ಶನಿ, ಇಲ್ಲವೆ ಒಂದು, ಮೂರು, ಆರು, ನಾಲ್ಕು, ಎಂಟು, ಹನ್ನೆರಡನೇ ಗುರು ಇದ್ದ ಸಮಯದಲ್ಲಿ ನೇರವಾದ ಸ್ಪರ್ಧೆಯನ್ನು ಎದುರಿಸಬೇಕಾಗುವದು

೧೦) ಮೂಲ ಜಾತಕದ ಲಗ್ನ, ಚತುರ್ಥ, ತೃತೀಯ, ಭಾಗ್ಯ, ಷಷ್ಠ, ವ್ಯಯ, ದಶಮ, ಈ ಯಾವುದೊಂದು ಸ್ಥಾನದಲ್ಲಿ ರವಿ, ಮಂಗಳ, ಚಂದ್ರ ಈ ಯಾವುದೊಂದು ಗ್ರಹವಿದ್ದು, ಗೋಚರೀ ಶನಿಯ ಪರಿಭ್ರಮಣವು ಈ ಸ್ಥಾನಗಳ ಮೇಲಿಂದ ಹಾಗೂ ಈ ಗ್ರಹಗಳ ಮೇಲಿಂದ ಆಗುತ್ತಿದ್ದರೆ, ಅಂಥ ಅಭ್ಯರ್ಥಿಯು ನೇರ ಹಾಗೂ ತುರುಸಿನ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

(೧೧) ಷಷ್ಠೇಶ, ಚತುರ್ಥೇಶರು ಜಾತಕದಲ್ಲಿ ಬಲಾಢ್ಯರಿದ್ದು, ಇವುಗಳ ದಶೆ, ಮಹರ್ದಶೆಗಳು ನಡೆಯುತ್ತಿದ್ದರೆ, ಸ್ಪರ್ಧೆಗಾಗಿ ಸ್ಪರ್ಧೆ ನಡೆಯುತ್ತಿದೆಯೇ ವಿನಃ ಸ್ಪರ್ಧೆಯ ಸಮಸ್ಯೆ ಉಂಟಾಗಲಾರದು,

(೧೨) ಬಲಾಢ್ಯ ಗ್ರಹಗಳು ಚತುರ್ಥ, ಷಷ್ಠದಲ್ಲಿದ್ದು, ಇವುಗಳ ದಶೆ, ಮಹರ್ದಶೆ ನಡೆದಾಗ, ಮೇಲಿನಂತೆಯೇ ಫಲ ಸಿಗುತ್ತದೆ.

(೧೩) ಗೋಚರಿಯಿಂದ ಗುರು, ಶನಿಯರು ಬಲಾಢ್ಯರಿದ್ದಾಗ ಸ್ಪರ್ಧೆಯ ಸಮಸ್ಯೆ ಉಂಟಾಗಲಾರದು.

**೪) ಆಯ್ಕೆ ಹೇಗಾಗುತ್ತದೆ ?:**

ಚುನಾವಣಾ ಪೂರ್ವ ಹಂತದಲ್ಲಿ ಅಭ್ಯರ್ಥಿಯು ಕೇಳಲಿರುವ ನಾಲ್ಕನೆಯ ಪ್ರಶ್ನೆ ಏನೆಂದರೆ ಆಯ್ಕೆ ಹೇಗಾಗುತ್ತದೆ? ಆಯ್ಕೆಯು ಅವಿರೋಧವಾಗಿರುವದೋ ? ಬಹುಮತದಿಂದಲೋ ? ಅತ್ಯಲ್ಪಮತದಿಂದಲೋ? ಇವೇ ಮೊದಲಾದ ಆಯ್ಕೆಯ ರೀತಿಯನ್ನು ಕುರಿತು ಪ್ರಶ್ನಿಸಲಾಗುತ್ತದೆ. ಚುನಾವಣೆಯಲ್ಲಿ ಸ್ಪರ್ಧಿಸಬೇಕೆಂಬುವವರು ಯಾವ ಪ್ರಮಾಣದಲ್ಲಿ ಗೆಲ್ಲಬಹುದು ? ಎಂಬುದು ಕೂಡ ಬಹಳ ಮುಖ್ಯವಿರುತ್ತದೆ. ಆಯ್ಕೆ ಹೇಗೆ ಇದ್ದೀತು ? ಎಂಬುದರ ಮೇಲೆ ಅಭ್ಯರ್ಥಿಯು ತನ್ನ

ಚುನಾವಣಾ ತಯಾರಿಯನ್ನು ಮಾಡಿಕೊಳ್ಳಬೇಕಾಗುತ್ತದೆ. ಈ ದೃಷ್ಟಿಯಿಂದ ಈ ಅಂಶವು ಚುನಾವಣೆಯಲ್ಲಿ ಅತಿ ಮುಖ್ಯವಾದುದು. ಆದುದರಿಂದ ಈ ಅಂಶದ ವಿಷಯಕ್ಕಾಗಿ ಜ್ಯೋತಿಷ್ಯದ ವಿಚಾರವೇನು? ಗ್ರಹಯೋಗ ಎಂತಿರ ಬೇಕೆಂಬುದನ್ನು ಪರಿಶೀಲಿಸುವಾ.

೧) ಸ್ಪರ್ಧೆಯು ವಿಷಯಕ್ಕಾಗಿ ಷಷ್ಠ ಸ್ಥಾನವನ್ನು ಹೇಗೆ ಪರಿಶೀಲಿಸಬೇಕೋ ಹಾಗೆಯೇ ಆಯ್ಕೆಯ ವಿಷಯಕ್ಕಾಗಿಯೂ ಚತುರ್ಥ ಸ್ಥಾನವನ್ನು ಪರಿಶೀಲಿಸಬೇಕಾಗುವದು. ಆದುದರಿಂದ ಚತುರ್ಥಸ್ಥಾನ, ಚತುರ್ಥೇಶರು ಪೋಷಕರೂ ಪೂರಕರೂ ಇದ್ದ ಜಾತಕನಿಗೆ ಆಯ್ಕೆಯ ಸಮಸ್ಯೆ ಉಂಟಾಗಲಾರದು.

೨) ಬಲಾಢ್ಯ ಗುರು, ಶುಕ್ರ, ಚಂದ್ರರಲ್ಲಿ ಯಾರೊಬ್ಬರು ಚತುರ್ಥ ಇಲ್ಲವೇ ಲಗ್ನದಲ್ಲಿದ್ದರೆ, ಅಂಥ ಅಭ್ಯರ್ಥಿಯ ಅವಿರೋಧ ಆಯ್ಕೆಯಾಗುತ್ತದೆ.

೩) ಷಷ್ಠ ಸ್ಥಾನ, ಚತುರ್ಥಸ್ಥಾನ, ತನುಸ್ಥಾನ, ಈ ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿದ್ದು, ಗೋಚರಿಯಿಂದ ಗ್ರಹಗಳ, ಅನುಕೂಲವಿದ್ದರೆ ಅಂಥ ಅಭ್ಯರ್ಥಿಗಳ ಆಯ್ಕೆಯು ಅವಿರೋಧವಾಗಿ ಆಗುತ್ತದೆ.

೪) ಉಚ್ಚ, ಸ್ವಕ್ಷೇತ್ರ, ಮಿತ್ರಕ್ಷೇತ್ರದ ಗ್ರಹವು ಷಷ್ಠದಲ್ಲಿ ಚತುರ್ಥದಲ್ಲಿ, ಲಗ್ನದಲ್ಲಿ, ಇದ್ದರೆ ಅಂಥ ಅಭ್ಯರ್ಥಿಯ ಆಯ್ಕೆಯು ಅವಿರೋಧವಾಗುತ್ತದೆ.

೫) ಚುನಾವಣೆಯು ನಡೆಯುವ ಸಮಯದಲ್ಲಿ ಗೋಚರಿ ಗ್ರಹಗಳು ಅನುಕೂಲವಿದ್ದರೆ, ಅಂಥ ಅಭ್ಯರ್ಥಿಯ ಆಯ್ಕೆಯು ಅವಿರೋಧವಾಗಿ ಆಗುತ್ತದೆ.

೬) ಚತುರ್ಥದಲ್ಲಿ ಬಲಾಢ್ಯ ಶುಭ ಗ್ರಹವಿದ್ದು, ಇಲ್ಲವೇ ಷಷ್ಠದಲ್ಲಿ ಬಲಾಢ್ಯ ಪಾಪಗ್ರಹವಿದ್ದು, ಇವುಗಳ ದಶೆ, ಮಹರ್ದಶೆಯ ಕಾಲದಲ್ಲಿ ಅವಿರೋಧ ಆಯ್ಕೆಯು ಸಂಭವವಿರುತ್ತದೆ.

೭) ಚತುರ್ಥದಲ್ಲಿ ಪಾಪ ಗ್ರಹಗಳಿದ್ದರೆ, ಅಂಥ ಅಭ್ಯರ್ಥಿಯು ಸ್ಪರ್ಧೆ ತುರುಸಿನದಿದ್ದು ಆಯ್ಕೆಯು ಅತ್ಯಲ್ಪ ಮತದಿಂದ ಆಗುತ್ತದೆ.

೮) ಶುಭ ಗ್ರಹಗಳು ಷಷ್ಠ ಸ್ಥಾನದಲ್ಲಿದ್ದರೆ, ಅತ್ಯಲ್ಪ ಮತದಿಂದ ಆಯ್ಕೆಯಾಗುತ್ತದೆ.

೯) ಬಲಾಢ್ಯ ಪಾಪಗ್ರಹಗಳು ಷಷ್ಠದಲ್ಲಿದ್ದರೆ; ಬಹುಮತದಿಂದ ಆಯ್ಕೆಯಾಗುತ್ತದೆ.

೧೦) ಬಲಾಢ್ಯ ಮಂಗಳನು ಚತುರ್ಥದಲ್ಲಿದ್ದರೆ ಅತ್ಯಲ್ಪಮತದಿಂದ ಆಯ್ಕೆಯಾಗುತಿದ್ದರೆ ಅದೇ ಬಲಾಢ್ಯ ಮಂಗಳನು ಷಷ್ಠಸ್ಥಾನದಲ್ಲಿದ್ದರೆ ಬಹುಮತದಿಂದ ಆಯ್ಕೆಯಾಗುತ್ತದೆ.

೧೧) ಸಿಂಹ, ಮಕರ ಲಗ್ನಗಳಿದ್ದು, ಮಂಗಳನು ಬಲಾಢ್ಯನಿದ್ದರೆ ಅತ್ಯಲ್ಪ ಮತದಿಂದ ಆಯ್ಕೆಯಾಗುತ್ತದೆ.

೧೨) ಮಿಥುನ, ವೃಶ್ಚಿಕ ಲಗ್ನಗಳಿದ್ದು, ಮಂಗಳನು ಬಲಾಢ್ಯನಿದ್ದರೆ ಪ್ರಚಂಡ ಬಹುಮತದಿಂದ ಆಯ್ಕೆಯಾಗುತ್ತದೆ.

೧೩) ಬಲಾಢ್ಯ ರವಿಯಿದ್ದು ವೃಷಭ ಲಗ್ನದ ವ್ಯಕ್ತಿಗಳಿಗೆ ಅತ್ಯಲ್ಪ ಮತಗಳೂ ಮೀನ ಲಗ್ನದವರಿಗೆ ಪ್ರಚಂಡ ಬಹುಮತವೂ ದೊರೆಯುತ್ತದೆ.

೧೪) ತುಲಾ, ವೃಶ್ಚಿಕ ಲಗ್ನಗಳಿದ್ದು, ಶನಿಯು ಬಲಾಢ್ಯನಿದ್ದರೆ, ಅತ್ಯಲ್ಪ ಮತದಿಂದ ಆಯ್ಕೆಯಾಗುತ್ತದೆ.

೧೫) ಸಿಂಹ, ಕನ್ಯಾ ಲಗ್ನಗಳಿದ್ದು, ಶನಿಯು ಬಲಾಢ್ಯನಿದ್ದರೆ, ಪ್ರಚಂಡ ಬಹುಮತದಿಂದ ಆಯ್ಕೆಯಾಗುತ್ತದೆ.

೧೬) ಕರ್ಕ, ಕುಂಭ ಲಗ್ನಗಳಿದ್ದು, ಶುಕ್ರನು ಬಲಾಢ್ಯನಿದ್ದರೆ, ಅವಿರೋಧವಾಗಿ ಆಯ್ಕೆಯಾಗುತ್ತದೆ.

೧೭) ವೃಷಭ, ಧನು ಲಗ್ನಗಳಿದ್ದು, ಶುಕ್ರನು ಬಲಾಢ್ಯನಿದ್ದರೆ, ಅತ್ಯಲ್ಪ ಮತದಿಂದ ಆಯ್ಕೆಯಾಗುತ್ತದೆ.

೧೮) ಮಿಥುನ, ಮೀನ ಲಗ್ನಗಳಿದ್ದು ಬುಧನು, ಬಲಾಢ್ಯನಿದ್ದರೆ, ಅತ್ಯಲ್ಪ ಮತದಿಂದ ಆಯ್ಕೆಯಾಗುತ್ತವೆ.

೧೯) ಮೇಷ, ಮಕರ ಲಗ್ನಗಳಿದ್ದು, ಬುಧನು ಬಲಾಢ್ಯನಿದ್ದರೆ, ಅತ್ಯಲ್ಪ ಮತಗಳಿಂದ ಆಯ್ಕೆ ಆಗುವದು.

೨೦) ಕನ್ಯಾ, ಮೀನ ಲಗ್ನಗಳಿದ್ದು, ಗುರುವು ಬಲಾಢ್ಯನಿದ್ದರೂ ಅವಿರೋಧವಾಗಿ ಆಯ್ಕೆಯಾಗುವದು.

೨೧) ಕರ್ಕ, ತುಲಾ ಲಗ್ನಗಳಿದ್ದು, ಗುರುವು ಬಲಾಢ್ಯನಿದ್ದರೆ, ಪ್ರಚಂಡ ಬಹುಮತದಿಂದ ಆಯ್ಕೆಯಾಗುತ್ತದೆ

೨೨) ಚಂದ್ರನು ಬಲಾಢ್ಯನಿದ್ದು ಮೇಷ, ಕರ್ಕ ಲಗ್ನದವರ ಆಯ್ಕೆಯು ಅವಿರೋಧವಾಗುತ್ತದೆ.

೨೩) ಚಂದ್ರನು ಬಲಾಢ್ಯನಿದ್ದು, ಕುಂಭ ಲಗ್ನದವರಿಗೆ ಅತ್ಯಲ್ಪ ಮತಗಳಿಂದ ಆಯ್ಕೆಯಾಗುತ್ತವೆ.

೨೪) ಬಲಾಢ್ಯ ಪಾಪಗ್ರಹಗಳು ಷಷ್ಠೇಶರಾಗಿದ್ದು, ಇವುಗಳ ದಶೆ, ಮಹರ್ದಶೆಯಲ್ಲಿ ಪ್ರಚಂಡ ಬಹುಮತ ದೊರೆಯುತ್ತವೆ.

೨೫) ಬಲಾಢ್ಯ ಪಾಪಗ್ರಹಗಳು ಚತುರ್ಥದಲ್ಲಿದ್ದು, ಇವುಗಳ ದಶೆ, ಮಹರ್ದಶೆಯಲ್ಲಿ ಅತ್ಯಲ್ಪ ಮತಗಳಿಂದ ಆಯ್ಕೆಯಾಗುತ್ತದೆ.

೨೬) ಬಲಾಢ್ಯ ಶುಭಗ್ರಹಗಳು ಚತುರ್ಥದಲ್ಲಿದ್ದು, ಅಥವಾ ಚತುರ್ಥೇಶರಾಗಿ ಇವುಗಳ ದಶೆ, ಮಹರ್ದಶೆ ನಡೆಯುತ್ತಿದ್ದರೆ ಅವಿರೋಧ ಆಯ್ಕೆಯಾಗುತ್ತದೆ.

೨೭) ಬಲಾಢ್ಯ ಶುಭಗ್ರಹಗಳು ಷಷ್ಠದಲ್ಲಿದ್ದರೆ ಅಥವಾ ಷಷ್ಠೇಶರಾಗಿದ್ದು ಇವುಗಳ ಮಹರ್ದಶೆ, ಅಂತರ್ದಶೆ ನಡೆಯುತ್ತಿದ್ದರೆ, ಅತ್ಯಲ್ಪ ಮತಗಳಿಂದ ಆಯ್ಕೆಯಾಗುತ್ತದೆ.

೨೮) ಲಗ್ನೇಶ, ಚತುರ್ಥೇಶ, ಭಾಗ್ಯೇಶರು ಬಲಾಢ್ಯರಿದ್ದು, ಇವುಗಳ ಮಹರ್ದಶೆಯಲ್ಲಿ ಚುನಾವಣೆ ನಡೆದರೆ, ಅವಿರೋಧ ಆಯ್ಕೆಯಾಗುತ್ತದೆ.

**೫) ಚುನಾವಣೆಯ ತಂಟೆ:-**

ಚುನಾವಣೆಯಲ್ಲಿ ಯಶಸ್ವಿಯೆಂದು ಸಾರಲ್ಪಟ್ಟಾಕ್ಷಣವೇ ವಿಜಯ ಸ್ಥಾನ ಭದ್ರವೆಂದು ಹೇಳಲು ಸಾಧ್ಯವಿಲ್ಲ. ಚುನಾವಣೆಯಲ್ಲಿ ಗೆದ್ದವರ ಮೇಲೆ ಸೋತವರು ಚುನಾವಣೆಯ ತಕರಾರುಅರ್ಜಿ ಸಲ್ಲಿಸಿ ನ್ಯಾಯಾಲಯದಲ್ಲಿ ಚುನಾವಣೆಯನ್ನು ಆಹ್ವಾನಿಸಬಹುದು. ಹೀಗೆ ಆದಾಗ ನಾಯ್ಯಾಲಯವು ಚುನಾವಣೆಯು ಕ್ರಮಬದ್ಧವೆಂದು ಸಾರಬಹುದು, ಇಲ್ಲವೇ ಅಕ್ರಮವೆಂದು ರದ್ದುಗೊಳಿಸಿ ವಿರೋಧಿಯನ್ನು ಚುನಾಯಿತನೆಂದು ಸಾರಬಹುದು ಅಥವಾ ಚುನಾವಣೆಯೇ ಅಕ್ರಮವೆಂದು ಸಾರಬಹುದು.

ಚುನಾವಣೆಯ ತಕರಾರುಅರ್ಜಿ ಸಲ್ಲಿಸಿದವರು ತಮ್ಮ ಪ್ರಾರ್ಥನೆಯಲ್ಲಿ ತಾವು ಚುನಾಯಿತರೆಂದು ಸಾರಬೇಕು ಅಥವಾ ಚುನಾವಣೆಯೇ ಅಕ್ರಮವೆಂದು ಸಾರಬೇಕೆಂದು ಕೇಳಿಕೊಳ್ಳುತ್ತಾರೆ. ನ್ಯಾಯಾಲಯವು ಸಾಮಾನ್ಯವಾಗಿ ಇಂಥ ತಕರಾರುಗಳಲ್ಲಿ ಚುನಾವಣೆಯ ಖರ್ಚು ನಿಯಮಿತ ಮಟ್ಟವನ್ನು ಮೀರಿದೆಯೇ, ಅಭ್ಯರ್ಥಿಗಳು ಅಕ್ರಮ ವಿಧಾನಗಳನ್ನು ಅನುಸರಿಸಿದ್ದಾರೆಯೇ, ಮುಂತಾದ ಅಂಶಗಳನ್ನು ಪರಿಶೀಲಿಸುತ್ತದೆ. ಈ ವಿಚಾರಣೆಯಲ್ಲಿ ವಾದಿಯ ಆರೋಪಗಳು ನಿರುಪಿತವಾದರೆ, ಪ್ರತಿವಾದಿಯ ಚುನಾವಣೆಯನ್ನು ರದ್ದುಗೊಳಿಸಿ ವಾದಿಯನ್ನು ಚುನಾಯಿತನೆಂದು ಸಾರಬಹುದು ಅಥವಾ ಪ್ರತಿವಾದಿಯ ಚುನಾವಣೆ ಕ್ರಮಬದ್ಧವೆಂದೂ ತೀರ್ಪನ್ನು ಕೊಡಬಹುದು ಅಥವಾ ಚುನಾವಣೆಯೇ ಅಕ್ರಮವೆಂದು ಸಾರಬಹುದು. ಇದರಿಂದಾಗಿ ಚುನಾವಣೆಯಲ್ಲಿ ಗೆದ್ದಾಕ್ಷಣ ಆ ಅಭ್ಯರ್ಥಿಯು ಪೂರ್ಣ ಅಧಿಕಾರಾವಧಿಯ

ವರೆಗೆ ಅಧಿಕಾರದಲ್ಲಿರಬಹುದೆಂದು ಹೇಳಲೂ ಅಸಾಧ್ಯ. ಈ ಅವಧಿಯ ವಿಷಯವನ್ನು ಪರಿಶೀಲಿಸಿದಾಗ ಇನ್ನೊಂದು ಅಂಶ ಗಮನಿಸಬೇಕೆಂದರೆ ತಕರಾರು ನಡೆದಿರುವಾಗಲೇ ಪ್ರತಿವಾದಿ ಸ್ವರ್ಗಸ್ಥನಾಗಬಹುದು. ಇದರಿಂದಲೂ ಕೂಡ ಅವನಿಗೆ ಪೂರ್ಣಾವಧಿಯುವರೆಗೆ ಅಧಿಕಾರದಲ್ಲಿರುವ ಯೋಗ ಇರಲಿಕ್ಕಿಲ್ಲ. ಈ ಎಲ್ಲ ಅಂಶಗಳನ್ನು ಜ್ಯೋತಿಷ್ಯ ದೃಷ್ಟಿಯಿಂದ ವಿಶ್ಲೇಷಿಸೋಣ.

೧) ಜಾತಕದಲ್ಲಿ ರವಿಯು ಬಲಾಢ್ಯನಿದ್ದ ವ್ಯಕ್ತಿಗೆ ಚುನಾವಣೆಯ ತಂಟೆಗಳು ಉದ್ಭವಿಸಲಾರವು.

೨) ರವಿಯು ನೀಚ, ಶತ್ರುಕ್ಷೇತ್ರದಲ್ಲಿದ್ದರೆ ಚುನಾವಣೆಯ ತಂಟೆಗಳನ್ನು ಎದುರಿಸಬೇಕಾಗುತ್ತದೆ.

೩) ಶನಿಯಿಂದ ದೃಷ್ಟಿಸಲ್ಪಟ್ಟ ರವಿ ಇದ್ದರೆ, ಅಥವಾ ರವಿ-ಶನಿಯರ ಯುತಿಯೋಗ, ಪ್ರತಿಯೋಗವಿದ್ದರೆ, ಚುನಾವಣೆಯ ತಂಟೆಗಳನ್ನು ಎದುರಿಸಬೇಕಾಗುತ್ತದೆ.

೪) ಅನೇಕ ಗ್ರಹಗಳು ಲಗ್ನ, ತೃತೀಯ, ಚತುರ್ಥ, ಷಷ್ಠ, ದಶಮದಲ್ಲಿದ್ದರೆ, ಚುನಾವಣೆಯ ತಂಟೆಗಳನ್ನು ಎದುರಿಸಬೇಕಾಗುವದು.

೫) ಅನೇಕ ಪಾಪಗ್ರಹಗಳು ಲಗ್ನ, ಚತುರ್ಥ, ದಶಮ, ಷಷ್ಠ, ವ್ಯಯದಲ್ಲಿದ್ದರೂ ಚುನಾವಣೆಯ ತಂಟೆಗಳನ್ನು ಎದುರಿಸಬೇಕಾಗುತ್ತದೆ.

೬) ಚತುರ್ಥೇಶ, ಷಷ್ಠೇಶರು ಬಲಾಢ್ಯರಿದ್ದ ವ್ಯಕ್ತಿಗೆ ಚುನಾವಣೆಯ ತಂಟೆಗಳು ಉದ್ಭವಿಸಲಾರವು. ಆದರೆ ಲಗ್ನೇಶ, ಭಾಗ್ಯೇಶರು ಬಲಾಢ್ಯರಿದ್ದು, ಚುನಾವಣೆಯ ತಂಟೆಗಳು ಏಳುವ ಸಂಭವವಿದೆ. ಆದರೆ ಆದರಲ್ಲಿ ಅವರ ಯಶ ನಿಶ್ಚಿತ.

೭) ಗುರು, ಶುಕ್ರ, ಚಂದ್ರರಲ್ಲಿ ಯಾರೊಬ್ಬರು ಬಲಾಢ್ಯರಾಗಿ ಚತುರ್ಥದಲ್ಲಿದ್ದರೆ, ಅಂಥ ಅಭ್ಯರ್ಥಿಗೆ ಚುನಾವಣೆಯ ತಂಟೆಗಳು ಉದ್ಭವಿಸಲಾರದು.

೮) ಶನಿ-ಮಂಗಳ, ಶನಿ-ರವಿ, ಶನಿ-ಚಂದ್ರ, ರವಿ-ಕೇತು, ಚಂದ್ರ-ರಾಹು, ಈ ಗ್ರಹಗಳ ಯುತಿಯೋಗ, ಪ್ರತಿಯೋಗಗಳು ಲಗ್ನ ಚತುರ್ಥ, ದಶಮ, ಷಷ್ಠ, ತೃತೀಯ ಈ ಸ್ಥಾನಗಳಲ್ಲಿದ್ದರೆ, ಚುನಾವಣೆಯ ತಂಟೆಗಳನ್ನು ಎದುರಿಸಬೇಕಾಗುತ್ತದೆ.

೯) ಶನಿಯಿಂದ ದೃಷ್ಟಿಸಲ್ಪಟ್ಟ ಚಂದ್ರನಿದ್ದರೂ ಚುನಾವಣೆಯ ತಂಟೆಗಳು ಏಳುವ ಸಂಭವವಿದೆ.

೧೦) ಸಾಡೇಸಾತಿ, ಪಂಚಮಾಷ್ಟಮ ಶನಿ, ಇಲ್ಲವೇ ಗೋಚರಿಯಿಂದ ಗುರುವು ನಾಲ್ಕನೇ, ಎಂಟನೇ, ಹನ್ನೆರಡನೇ, ಮೂರನೇ, ಆರನೇಯವನಾಗಿದ್ದರೆ ಚುನಾವಣೆಯ ತಂಟೆಗಳು ಎದುರಿಸಬೇಕಾಗುತ್ತದೆ.

೧೧) ರವಿ, ಮಂಗಳ, ಚಂದ್ರ, ಈ ಮೂರು ಗ್ರಹಗಳಲ್ಲಿ ಯಾವುದೇ ಗ್ರಹವು ಲಗ್ನ, ಚತುರ್ಥ, ಷಷ್ಠ, ತೃತೀಯ, ದಶಮ, ವ್ಯಯ ಈ ಯಾವುದೊಂದು ಸ್ಥಾನದಲ್ಲಿದ್ದು, ಗೋಚರಿಯಿಂದ ಶನಿಯ ಪರಿಭ್ರಮಣವು ಈ ಗ್ರಹಗಳ ಮೇಲಿಂದಾಗುತ್ತಿದ್ದಾಗ ಚುನಾವಣೆಯ ತಂಟೆಯನ್ನು ಎದುರಿಸಬೇಕಾಗುತ್ತದೆ.

೧೨) ಚತುರ್ಥ ಸ್ಥಾನ, ಚತುರ್ಥೇಶ ಬಲಾಢ್ಯರಿದ್ದ ಮೇಷ, ಕರ್ಕ, ಕನ್ಯಾ, ಧನು, ಕುಂಭ ಈ ಲಗ್ನದವರಿಗೆ ಚುನಾವಣೆಯ ತಂಟೆಯನ್ನು ಎದುರಿಸುವ ಪ್ರಸಂಗ ಬರುವದಿಲ್ಲ.

೧೩) ಚತುರ್ಥೇಶನು ದುರ್ಬಲನಿದ್ದ ಹಾಗೂ ಚತುರ್ಥ ಸ್ಥಾನ ದುರ್ಬಲವಿದ್ದ ವೃಷಭ, ಸಿಂಹ, ತುಲಾ, ವೃಶ್ಚಿಕ, ಮಕರ, ಮಿಥುನ, ಮೀನ ಈ ಲಗ್ನದವರಿಗೆ ಚುನಾವಣೆಯ ತಂಟೆಗಳನ್ನು ಎದುರಿಸಬೇಕಾಗುತ್ತದೆ.

**೬) ಪಕ್ಷಾಂತರದ ಅವಾಂತರ:-**

ಭಾರತೀಯ ರಾಜಕೀಯದಲ್ಲಿ ಪಕ್ಷಾಂತರ ಅವಾಂತರವೊಂದು ಹೊಸ ಪಿಡುಗಾಗಿ ತಲೆ ಎತ್ತಿದೆ. ಪಕ್ಷಾಂತರವು ಅನೇಕ ಕಾರಣಗಳಿಂದ ಆಗುತ್ತದೆ.

ಅಧಿಕಾರ ಧಾಹದಿಂದ ಪಕ್ಷದಿಂದ ಪಕ್ಷಕ್ಕೆ ಜಿಗಿಯುವ ರಾಜಕಾರಣಿಗಳು ಈಗಿನ ರಾಜಕೀಯದಲ್ಲಿ ಬಹಳವಾಗಿದ್ದಾರೆ. ಯಾವ ಪಕ್ಷ ಅಧಿಕಾರಕ್ಕೆ ಬರುತ್ತದೆಂದು ಅರಿತು ಆ ಪಕ್ಷವನ್ನು ಸೇರುವ ಜಾಣ್ಮೆಯನ್ನು ರಾಜಕೀಯ ಚತುರತೆಯೆಂದು ಹೇಳುವಷ್ಟರಮಟ್ಟಿಗೆ ಬಂದಿದೆ. ಕೆಲವರು ಕೇವಲ ಅಧಿಕಾರ ದಾಹದಿಂದ ಪಕ್ಷಾಂತರ ಮಾಡಿದರೆ, ಕೆಲವರು ಹಣದಾಸೆ, ಹಾಗೂ ಅಧಿಕಾರ ದಾಹದಿಂದ ಪಕ್ಷಾಂತರ ಮಾಡುತ್ತಾರೆ. ರಾಜಕೀಯ ಲಂಚಗುಳಿತನ ಪ್ರತಿನಿಧಿಗಳನ್ನು ಕೊಳ್ಳುವದು ಹಣಪಡೆದು ಪಕ್ಷಾಂತರ ಮಾಡುವದರಲ್ಲಿ ಅಡಕವಾಗಿದೆ. ಇದು ಒಂದು ಬಗೆಯ ಪಕ್ಷಾಂತರವಾದರೆ, ಪಕ್ಷಾಂತರಕ್ಕೆ ಇತರ ಕಾರಣಗಳು ಇವೆ-ವ್ಯಕ್ತಿನಿಷ್ಠೆ, ತತ್ವನಿಷ್ಠೆ, ಜಾತಿನಿಷ್ಠೆ, ಚುನಾವಣಾನಿಷ್ಠೆ ಈ ನಾಲ್ಕು ಬಗೆಯ ಪಕ್ಷಾಂತರಗಳಿರುವದು ಕಂಡು ಬರುತ್ತದೆ.

ಕೆಲ ಅನುಯಾಯಿಗಳು ತಮ್ಮ ನಾಯಕರು ಹೋದ ಪಕ್ಷಕ್ಕೆ ಹೋಗುವೆ ಎನ್ನುತ್ತಾರೆ. ‘ ನನ್ನ ನಾಯಕನಿದ್ದಲ್ಲಿ ನಾನು ’ ಈ ಬಗೆಯ ಪಕ್ಷಾಂತರದಲ್ಲಿ ಗುಂಪು ಗುಂಪಾಗಿ ಪಕ್ಷಾಂತರವಾಗುತ್ತದೆ. ಇದು ವ್ಯಕ್ತಿ ನಿಷ್ಠೆಯಿಂದ ಪಕ್ಷಾಂತರವಾಗುತ್ತದೆ.

ಇನ್ನೊಂದು ಜಾತಿನಿಷ್ಠೆ. ನಮ್ಮ ರಾಜಕೀಯದಲ್ಲಿ ಜಾತೀಯ ಪ್ರಭಾವ ಬಹಳ ಪ್ರಬಲವಾದದ್ದು. ಜಾತೀಯ ರಾಜಕೀಯ ಪಕ್ಷಗಳು ತಲೆಯೆತ್ತಿರು ವಂತೆ, ಎಲ್ಲ ರಾಜಕೀಯ ಪಕ್ಷಗಳಲ್ಲಿ ಜಾತಿಗಳು ತಲೆ ಎತ್ತಿವೆ ಹೀಗಿರುವದ ರಿಂದ ಜಾತಿನಿಷ್ಠೆಯಿಂದ ರಾಜಕಾರಣಿಗಳು ಪಕ್ಷಾಂತರ ಮಾಡುತ್ತಾರೆ ಸಾಮಾನ್ಯವಾಗಿ ಅಲ್ಪಸಂಖ್ಯಾಕ ಜಾತೀಯ ವರ್ಗವು ಗದ್ದೆತ್ತಿನ ಬಾಲ ಹಿಡಿಯುತ್ತದೆ. ಇದೇ ಮುಖ್ಯ ಕಾರಣದಿಂದ ಜಾತೀಯ ನಿಷ್ಠೆಯ ಪಕ್ಷಾಂತರವಾಗುತ್ತದೆ.

ತತ್ವನಿಷ್ಠೆಯಿಂದಲೂ ಪಕ್ಷಾಂತರವಾಗುತ್ತದೆ. ಯಾವುದಾದರೂ ರಾಜ ಕೀಯ ಪಕ್ಷ ತನ್ನ ಮೂಲ ತತ್ವಗಳಿಂದ ದೂರ ಸರಿದಾಗ ತತ್ವನಿಷ್ಠೆಯ ಆ ಪಕ್ಷದ ಸದಸ್ಯರು ಪಕ್ಷ ಬಿಡಬೇಕಾಗುತ್ತದೆ. ಇದರಿಂದಲೂ ಪಕ್ಷಾಂತರ ವಾಗುತ್ತದೆ.

ಕೊನೆಯದಾಗಿ ಯಾರೊಬ್ಬ ಅಭ್ಯರ್ಥಿಗೆ ತನ್ನ ನಿರ್ದಿಷ್ಟವಾದ ಪಕ್ಷದಿಂದ ಚುನಾವಣೆಗೆ ಅನುಮತಿ(ತಿಕೀಟು) ದೊರೆಯದಿದ್ದಾಗ ಪಕ್ಷಾಂತರ ಮಾಡಿಯಾದರೂ ಚುನಾವಣೆಗೆ ನಿಲ್ಲುವ ಈ ವರ್ಗದವರಿಗೆ ಚುನಾವಣೆ ನಿಷ್ಠೆಯೇ ಪ್ರಾಮುಖ್ಯವಾಗಿರುತ್ತದೆ.

ಹೀಗಾಗಿ ಕ್ಷಾಪಂತರದಿಂದ ಆಯ್ಕೆಯಾದ ಅಭ್ಯರ್ಥಿ ಪೂರ್ಣ ಅವಧಿಯ ವರೆಗೆ ಅಧಿಕಾರದಲ್ಲಿರುತ್ತಾನೊ ಇಲ್ಲವೊ ಎಂದು ಹೇಳಲು ಸಾಧ್ಯ ವಾಗುತ್ತದೆ. ಏಕೆಂದರೆ, ಅಧಿಕಾರ ದೊರೆಯುವದೆಂಬ ಅಭಿಲಾಷೆಯಿಂದ ಪಕ್ಷಾಂತರ ಮಾಡಿ ಯಾವುದೊಂದು ಪಕ್ಷವೂ ಸರಕಾರ ರಚಿಸಲಾರದಂತಾಗಿ ವಿಧಾನಸಭೆ ವಿಸರ್ಜಿಸಲ್ಪಟ್ಟ ಉದಾಹರಣೆಗಳೂ ಸಾಕಷ್ಟಿವೆ.

ಮಾನವನ ಗುಣದೋಷದಲ್ಲೊಂದಾದ ಈ ಪಕ್ಷಾಂತರದ ಅವಾಂತರವು ಇಂದು ನಿನ್ನೆಯದಲ್ಲ. ರಾಮಾಯಣದಲ್ಲಿ ವಿಭೀಷಣ, ಸುಗ್ರೀವರು ಪಕ್ಷಾಂತರ ಹೊಂದಿದ್ದೂ, ಮಹಾಭಾರತದಲ್ಲಿ ಕರ್ಣನಿಗೆ ಪಕ್ಷಾಂತರ ಗೊಳಿಸಲು ಪ್ರಯತ್ನಿಸಿದ್ದು ಹಾಗೂ ಇತಿಹಾಸದಲ್ಲಿಯಂತೂ ಪಕ್ಷಾಂತರದ ಉದಾಹರಣೆಗಳು ಸಾಕಷ್ಟಿವೆ. ಈ ಪಕ್ಷಾಂತರವನ್ನು ಕಾಯ್ದೆಯ ಮೂಲಕ ಪ್ರತಿಬಂಧಿಸಬೇಕೆಂದು ಚರ್ಚೆ ನಡೆಯುತ್ತಿದೆ, ಆದರೆ, ಪಾನಪ್ರತಿಬಂಧ, ವೇಶ್ಯಾವೃತ್ತಿ ಪ್ರತಿಬಂಧದಂತೆ ವ್ಯರ್ಥವಾಗಬಹುದಾಗಿದೆ. ಇದೇನೇ ಇರಲಿ, ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಯಾವ ಜಾತಕನು ಪಕ್ಷಾಂತರ ಮಾಡಬಹುದು ಅಥವಾ ಪಕ್ಷಾಂತರ ಮಾಡುವ ವ್ಯಕ್ತಿಯ ಜಾತಕದಲ್ಲಿ ಗ್ರಹಬಲ ಎಂತಿರುತ್ತವೆ ಎಂಬುವದನ್ನು ಪರಿಶೀಲಿಸುವಾ.

**ಕಾರಕ ಗ್ರಹ:**– ಸಾಮಾನ್ಯವಾಗಿ ಜಾತಕದಲ್ಲಿ ಚಂದ್ರನು ದುರ್ಬಲ ನಿದ್ದ ವ್ಯಕ್ತಿಗಳೇ ಪಕ್ಷಾಂತರವಾಗುವದು ಹೆಚ್ಚು. ಚಂದ್ರನ ನಂತರ ಬುಧನು ಪಕ್ಷಾಂತರ ಪ್ರವೃತ್ತಿಗೆ ಪೋಷಕನಿರುತ್ತಾನೆ. ಆದುದರಿಂದ ಚಂದ್ರ, ಬುಧರು ಪಕ್ಷಾಂತರ ಪ್ರವೃತ್ತಿಯ ಕಾರಕ ಗ್ರಹಗಳಿರುತ್ತಾರೆ.

**ಕಾರಕ ಸ್ಥಾನ:**– ಸಾಮಾನ್ಯವಾಗಿ ಪಕ್ಷಾಂತರ ಮಾಡುವ ವ್ಯಕ್ತಿಗಳ ಜಾತಕದಲ್ಲಿ ತನು ಸ್ಥಾನ (ಲಗ್ನ), ಚತುರ್ಥಸ್ಥಾನಗಳು ದೂಷಿತ ಇರುತ್ತವೆ.

ತನುಸ್ಥಾನ, ಚತುರ್ಥಸ್ಥಾನಗಳು ಮನಸ್ಸಿನ ಸ್ಥಾನಗಳಿರುತ್ತವೆ. ಚಿತ್ತ ಚಂಚಲ, ಅಸ್ಥಿರತೆ ಗುಣಗಳ ಕಾರಕ ಸ್ಥಾನಗಳಾದ ಚತುರ್ಥಸ್ಥಾನ, ತನುಸ್ಥಾನ ದೂಷಿತರಿರದೆ ಯಾರೂ ಪಕ್ಷಾಂತರ ಮಾಡುವದಿಲ್ಲ. ಆದುದರಿಂದ ಲಗ್ನ – ಲಗ್ನೇಶ, ಚತುರ್ಥಸ್ಥಾನ – ಚತುರ್ಥೇಶ ಈ ನಾಲ್ಕು ಸಂಗತಿಗಳು ದೂಷಿತರಿರದೇ ಯಾರೂ ಪಕ್ಷಾಂತರ ಮಾಡಲಾರರು.

**ಕಾರಕ ಲಗ್ನ:**– ಲಗ್ನದೃಷ್ಟಿಯಿಂದ ಪರಿಶೀಲಿಸಿದರೆ, ನಿರ್ದಿಷ್ಟ ಲಗ್ನದವರೇ ಪಕ್ಷಾಂತರ ಮಾಡುವರು ಎಂದು ಹೇಳಲು ಬಾರದಿದ್ದರೂ ಮೇಷ, ಮಿಥುನ. ಕರ್ಕ, ಕನ್ಯಾ, ಮೀನ, ಈ ಲಗ್ನದವರೇ ಹೆಚ್ಚಾಗಿರುವದು ಕಂಡು ಬರುತ್ತದೆ.

**ರಾಶಿ:**– ರಾಶಿ ದೃಷ್ಟಿಯಿಂದ ನೋಡಿದರೆ, ನಿರ್ದಿಷ್ಟ ರಾಶಿಯವರೇ ಪಕ್ಷಾಂತರ ಪ್ರವೃತ್ತಿಯವರೆಂದು ಹೇಳಲು ಬಾರದಿದ್ದರೂ ಕರ್ಕ, ಮೀನ, ಮಿಥುನ, ತುಲಾ, ಕುಂಭ ಈ ರಾಶಿಯವರೇ ಹೆಚ್ಚಾಗಿರುವದು ಕಂಡು ಬರುತ್ತದೆ.

**ಯೋಗ:** ಈ ಕೆಳಗೆ ಕಾಣಿಸಿದ ಯೋಗಗಳಿದ್ದ ಜಾತಕನು ಪಕ್ಷಾಂತರ ಪ್ರವೃತ್ತಿಯವನಿರುತ್ತಾನೆ.

೧) ವೃಷಭ, ಕರ್ಕ, ಕನ್ಯಾ, ಮೀನ ಈ ನಾಲ್ಕು ರಾಶಿಯ ಜನರು ವ್ಯಕ್ತಿ ನಿಷ್ಠೆ, ನಾಯಕನಲ್ಲಿಯ ನಂಬಿಕೆ, ಮೊದಲಾದ ಗುಣಗಳನ್ನು ಹೊಂದಿದವರಿದ್ದು, ಈ ಅನುಯಾಯಿವರ್ಗದ ಈ ರಾಶಿಯ ಜನರು ಅವರ ನಾಯಕರು ಪಕ್ಷಾಂತರವಾದಂತೆ ಇವರೂ ಪಕ್ಷಾಂತರಗೊಳ್ಳುತ್ತಾರೆ.

೨) ಶನಿಯಿಂದ ದೃಷ್ಟಿಸಲ್ಪಟ್ಟ ಚಂದ್ರನಿದ್ದರೆ, ಜಾತಕನು ಅಸ್ಥಿರ ಸ್ವಭಾವದ ಮೂಲಕ ಪಕ್ಷಾಂತರಗೊಳ್ಳುತ್ತಾನೆ.

೩) ಚಂದ್ರನು ಲಗ್ನ, ಚತುರ್ಥ, ಷಷ್ಠ, ವ್ಯಯ, ದಶಮ, ಅಷ್ಟಮ ಈ ಆರು ಸ್ಥಾನಗಳಲ್ಲಿ ನಿರ್ಬಲವಾಗಿದ್ದ ವ್ಯಕ್ತಿಗಳು ಒತ್ತಾಯದಿಂದ ಪಕ್ಷಾಂತರವಾಗುತ್ತಾರೆ.

೪) ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮೀನ ಈ ಐದು ರಾಶಿಯ ಜನರು ಒತ್ತಾಯದಿಂದ ಪಕ್ಷಾಂತರಗೊಳ್ಳುತ್ತಾರೆ.

೫) ಚಂದ್ರ-ಶನಿ, ಚಂದ್ರ-ರಾಹುಗಳ ಯುತಿಯೋಗವು ಯಾವುದೆ ಸ್ಥಾನದಲ್ಲಿದ್ದರೂ ಅಸ್ಥಿರತೆಯ ಸ್ವಭಾವದ ಮೂಲಕ ಪಕ್ಷಾಂತರ ಗೊಳ್ಳುವರು.

೬) ಮೇಷ, ಮಿಥುನ, ಸಿಂಹ, ಕುಂಭ,ವೃಶ್ಚಿಕ, ಮಕರ, ಮೀನ, ಧನು ಈ ಎಂಟು ರಾಶಿಯ ಜನರು ಸಿದ್ಧಾಂತ ತತ್ವಗಳಲ್ಲಿ ನಿಷ್ಠೆಯುಳ್ಳವ ರಿದ್ದು, ತಾವು ನಂಬಿದ ಸಿದ್ಧಾಂತ-ತತ್ವಗಳಿಗೆ ಚ್ಯುತಿ ಬಂದರೆ, ಪಕ್ಷಾಂತರ ಗೊಳ್ಳುತ್ತಾರೆ.

೭) ಮಿಥುನ, ತುಲಾ, ಕುಂಭ, ಸಿಂಹ, ಮಕರ, ವೃಶ್ಚಿಕ, ಮೇಷ, ಧನು, ಮೀನ ಈ ಒಂಭತ್ತು ರಾಶಿಯ ಜನರು ನಾಯಕರಿರುವದೇ ಹೆಚ್ಚಾ ಗಿದ್ದು ಇವರು ಅಧಿಕಾರಕ್ಕಾಗಿ, ಅಧಿಕಾರ ಪಡೆಯುವದಕ್ಕಾಗಿ ಯಾವದೇ ಪಕ್ಷ ತ್ಯಜಿಸಲು, ಯಾವುದೇ ಪಕ್ಷ ಸೇರಲು, ಹೊಸ ಪಕ್ಷ ಕಟ್ಟಲು, ಸಮರ್ಥರಿರುತ್ತಾರೆ. ಈ ರಾಶಿಯ ಜನರು ಪಕ್ಷಾಂತರವಾದರೆ ತಮ್ಮ ಹಿಂದಿರುವ ಅಸಂಖ್ಯಾತ ಅನುಯಾಯಿಗಳೊಂದಿಗೆ ಪಕ್ಷಾಂತರ ಮಾಡುತ್ತಾರೆ.

೮) ಅನೇಕ ಗ್ರಹಗಳು ಲಗ್ನ, ಚತುರ್ಥ, ದಶಮದಲ್ಲಿದ್ದ ಜಾತಕರು ಮೇಲಿಂದ ಮೇಲೆ ಪಕ್ಷಾಂತರ ಮಾಡುವರು ಅಥವಾ ಪಕ್ಷಗಳೇ ಅವರನ್ನು ಹೊರದೂಡುವವು.

೯) ಮಿಥುನ, ಕುಂಭ, ವೃಶ್ಚಿಕ, ಮಕರ ಈ ನಾಲ್ಕು ರಾಶಿಯವರು ಧೂರ್ತರೂ ಚಾಣಾಕ್ಷರೂ ಇದ್ದು, ಗಾಳಿಬಿಟ್ಟ ಕಡೆಗೆ ಕೊಡೆ ಹಿಡಿಯುವ ಇವರು, ಅಧಿಕಾರದ ಕಡೆಗೆ ಹೋಗುತ್ತಾರೆ. ಇವರ ನೆಲೆ ತಿಳಿಯುವದೇ ಕಠಿಣವಿದ್ದು, ಅಧಿಕಾರಕ್ಕಾಗಿ ಪಕ್ಷಾಂತರಮಾಡುವರು.

೧೦) ಲಗ್ನ, ಚತುರ್ಥವಲ್ಲಿ ಪಾಪಗ್ರಹಗಳಿದ್ದರೆ, ಪಕ್ಷದಲ್ಲಿಯ ಬಡಿದಾಟದಿಂದ ಪಕ್ಷ ತ್ಯಜಿಸುವರು ಅಥವಾ ಪಕ್ಷವೇ ಅವರನ್ನು ಹೊರ ಹಾಕುವದು.

೧೧) ಲಗ್ನ, ಚತುರ್ಥದಲ್ಲಿ ಗುರು, ಶುಕ್ರ, ಚಂದ್ರ ಈ ಮೂವರಲ್ಲಿ ಯಾರಿಬ್ಬರಿದ್ದರೂ ಇಂಥ ಜನರು ಎಲ್ಲ ಪಕ್ಷಗಳಿಗೂ ಬೇಕಾದವರಿದ್ದು, ಅನೇಕ ಪಕ್ಷಗಳ ಬೇಡಿಕೆಯು ಒತ್ತಾಯುಕ್ಕೆ ಮಣಿದು, ಪಕ್ಷಾಂತರ ಮಾಡು ವರಿದ್ದಾಗ್ಯೂ ಅವರಿದ್ದ ಪಕ್ಷವು ಅವರನ್ನು (ಕಳಿಸಲಾರದು), ಬಿಡಲಾರದು.

೧೨) ಬುಧ, ಚಂದ್ರರು, ವಾಯು ರಾಶಿಯುಲ್ಲಿದ್ದ ಜಾತಕನು ಪಕ್ಷಾಂತರ ಮಾಡುವನು.

೧೩) ಚಂದ್ರ-ಶನಿ, ಚಂದ್ರ-ರಾಹು ಇವರ ಯುತಿಯೋಗ ಪ್ರತಿ ಯೋಗವಾಗಲೀ ಅಥವಾ ಲಗ್ನ-ಲಗ್ನೇಶ, ಚತುರ್ಥ-ಚತುರ್ಥೇಶ ಈ ನಾಲ್ಕು ಸಂಗತಿಗಳು ದೂಷಿತವಿದ್ದ ವ್ಯಕ್ತಿಗಳು ಹಣದಾಶೆಯಿಂದ ಪಕ್ಷಾಂತರ ಮಾಡುತ್ತಾರೆ.

೧೪) ಗುರು, ಶನಿಯುರು ಬಲಾಢ್ಯರಿದ್ದ ಜಾತಕನು ಜಾತಿನಿಷ್ಟೆ ಯುಳ್ಳವನಿದ್ದು, ಜಾತೀಯತೆಗಾಗಿ ಪಕ್ಷಾಂತರ ಮಾಡುವನು.

೧೫) ಸ್ತ್ರೀ ಲಗ್ನವಿದ್ದ ಜಾತಕನು ಅಥವಾ ಸ್ತ್ರೀರಾಶಿ ಚತುರ್ಥದಲ್ಲಿದ್ದ ಜಾತಕನು ಅಥವಾ ಚತುರ್ಥೇಶ, ಲಗ್ನೇಶರು ಸ್ತ್ರೀ ರಾಶಿಯುಲ್ಲಿದ್ದ ಜಾತಕನು ಅಥವಾ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿದ್ದ ಜಾತಕನೂ ಪಕ್ಷಾಂತರ ಪ್ರವೃತ್ತಿಯುಳ್ಳವನಿರುತ್ತಾನೆ.

೧೬) ಗೋಚರಿಯುಂದ ಪಂಚಮಾಷ್ಟಮ, ಸಾಡೇಸಾತಿ, ಮೊದಲಾದ ಅಶುಭ ಕಾಲವಿದ್ದಾಗ ಒತ್ತಾಯದಿಂದಾಗಲೀ ಆಶೆಯಿಂದಾಗಲೀ. ಅನಿ-ವಾರ್ಯದಿಂದಾಗಲೀ ಪಕ್ಷಾಂತರವಾಡದೇ ವಿಧಿಯಿಲ್ಲ ಎಂಬ ಪ್ರಸಂಗಗಳಿಂದ ಪಕ್ಷಾಂತರರೂಳ್ಳುತ್ತಾರೆ.

೧೩) ದುರ್ಬಲ ಲಗ್ನೇಶ, ಚತುರ್ಥೇಶರಿದ್ದು ಅಥವಾ ಲಗ್ನ-ಚತುರ್ಥದಲ್ಲಿದ್ದ ದುರ್ಬಲ ಗ್ರಹಗಳಿದ್ದು ಈ ಗ್ರಹಗಳ ಮಹಾದರ್ಶೆ, ಅಂತರ್ದಶೆಗಳ ಕಾಲದಲ್ಲಿ ಪಕ್ಷಾಂತರವಾಗುವದು ಹೆಚ್ಚು.

## ೭ ಅಧಿಕಾರ ಸ್ಥಾನದ ಪ್ರಾಪ್ತಿ

ಯಾವುದೇ ರಾಜಕೀಯ ಸಂಸ್ಥೆಗೆ ಸದಸ್ಯರಾಗಿ ಚುನಾಯಿತರಾಗುವದು ಪ್ರಥಮ ಹಂತವಾದರೆ, ಚುನಾಯಿತರಾಗಿ ಆ ಸಂಸ್ಥೆಯ ಅಧಿಕಾರೀ ಸ್ಥಾನಗಳನ್ನು ಪಡೆಯುವ ಪ್ರಯತ್ನ ದ್ವಿತೀಯ ಹಂತವಾಗುತ್ತದೆ. ವಿಧಾನಸಭಾ ಸದಸ್ಯನಾಗಿ ಆಯ್ಕೆ ಹೊಂದಿದ ಯಾವ ಅಭ್ಯರ್ಥಿಯೇ ಆಗಲಿ ತಾನು ಮುಖ್ಯ ಮಂತ್ರಿಯಾಗುವೆನೋ? ಮಂತ್ರಿಯಾಗುವೆನೋ? ಉಪಮಂತ್ರಿಯಾಗುವೆನೋ? ಅಥವಾ ಮಿಕ್ಕಾವ ಅಧಿಕಾರಸ್ಥಾನ ಪಡೆಯುವೆನೋ? ಎಂಬ ಕಾತುರದಲ್ಲಿರುತ್ತಾನೆ. ಇದು ಸಹಜ. ಈ ಬಗ್ಗೆ ತನಗೆ ಅಧಿಕಾರೀಸ್ಥಾನ ದೊರೆಯುತ್ತದೆಯೋ? ಇಲ್ಲವೋ? ಎಂಬ ಪ್ರಶ್ನೆ ಒಂದೆಡೆ ಇದ್ದರೆ, ದೊರೆತರೆ ಎಂದು ದೊರೆ-ತೀತು? ದೊರೆತ ಅಧಿಕಾರ ಎಷ್ಟು ದಿನ ಉಳಿದೀತು? ಎಂಬ ಉಪ ಪ್ರಶ್ನೆಗಳಿಗೇನೂ ಕೊರತೆಯಿಲ್ಲ. ಇದರಂತೆಯೇ ಸಂಸತ್ ಸದಸ್ಯರಾದವರೂ ತಾವು ಕೇಂದ್ರದ ಕ್ಯಾಬಿನೆಟ್ ಸಚಿವರಾಗುವೆವೋ? ಸಹಾಯಕ ಸಚಿವರಾಗುವೆವೋ? ಉಪಸಚಿವರಾಗುವೆವೋ? ಸಂಸದೀಯ ಕಾರ್ಯದರ್ಶಿಗಳೋ? ಸಭಾಪತಿ, ಉಪಸಭಾಪತಿ ಅಥವಾ ಸಭಾಪತಿಗಳ ಪ್ಯಾನೆಲ್‌ನಲ್ಲಿರುವೆವೋ? ಎಂಬ ಪ್ರಶ್ನೆಗಳ ಮಾಲಿಕೆಯನ್ನೇ ಕೇಳುತ್ತಾರೆ.

ಈ ಬಗೆಯ ಪ್ರಶ್ನೆ ಕೇಳುವವರು ಕೇವಲ ಸಂಸತ್ತು, ವಿಧಾನ ಸಭೆ, ವಿಧಾನ ಪರಿಷತ್ತಿನ ಸದಸ್ಯರಷ್ಟೇ ಅಲ್ಲ, ಎಲ್ಲ ರಾಜಕೀಯ ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ತಿಕ, ಸ್ಥಾನಿಕ, ಶೈಕ್ಷಣಿಕ, ಸಹಕಾರೀ, ಕಾರ್ಮಿಕ, ಧಾರ್ಮಿಕ, ಸೇವಾಸಂಘ ಮೊದಲಾದ ಎಲ್ಲ ಬಗೆಯ ಸಂಘ ಸಂಸ್ಥೆಗಳ ಸದಸ್ಯರು ಈ ಬಗೆಯ ಒಂದಲ್ಲ ಒಂದು ಪ್ರಶ್ನೆ ಅಥವಾ ಪ್ರಶ್ನೆಗಳ ಮಾಲಿಕೆಯನ್ನು ಅಧಿಕಾರ ಪ್ರಾಪ್ತಿಯ ಬಗೆ

ಕೇಳುತ್ತಾರೆ. ನಗರಸಭೆ, ಕಾರ್ಪೋರೇಶನ್, ಸದಸ್ಯರಾಗಿ ಆಯ್ಕೆಯಾಗಿ ಬಂದರೆ ಆ ಸದಸ್ಯರ ದೃಷ್ಟಿ ನಗರಸಭೆಯ ಮಹಾನಗರಸಭೆಯ ಮೇಯರ - ಅಧ್ಯಕ್ಷ ಸ್ಥಾನದಿಂದ ಸ್ಥಾಯೀ ಸಮಿತಿಯ ಸದಸ್ಯತ್ವದ ವರೆಗೆ ಇರುತ್ತದೆ. ಇದರಂತೇ ತಾಲೂಕಾಭಿವೃದ್ಧಿ ಮಂಡಳ, ಜಿಲ್ಹಾ ಪರಿಷತ್, ಪಂಚಾಯ್ತಿ, ಮೊದಲಾದ ಸ್ಥಾನಿಕ ಸಂಸ್ಥೆಗಳಿಗೆ ಆಯ್ಕೆ ಹೊಂದಿದ ವ್ಯಕ್ತಿಯು ಅಧ್ಯಕ್ಷ, ಉಪಾಧ್ಯಕ್ಷ, ಚೇರಮನ್ ಮೊದಲಾದ ಸ್ಥಾನ ಗಳಿಗೆ ಆಶೆ ಪಡುವದರಲ್ಲಿ ಏನೂ ಆಶ್ಚರ್ಯವಿಲ್ಲ. ನಮ್ಮ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ತಿಕ, ಕಾರ್ಮಿಕ, ಮುಂತಾದ ಕ್ಷೇತ್ರ ಗಳಲ್ಲಿ ಅಧಿಕಾರಕ್ಕೆ ಮಾನ್ಯತೆ, ಸ್ಥಾನಮಾನದೊಡನೆ ಅಧಿಕಾರದಿಂದ ಆರ್ಥಿಕ ಲಾಭಗಳಿರುವವರೆಗೆ ಈ ಆಶೆ-ಆಮಿಷಗಳಲ್ಲಿ ಯಾವ ಆಶ್ಚರ್ಯವೂ ಇಲ್ಲ. ಎಲ್ಲವೂ **ಅಧಿಕಾರನುಯ**ವಾದುದರಿಂದ ಚುನಾಯಿತ ಸದಸ್ಯ ರಷ್ಟೇ ಅಲ್ಲ **ನಾಮಕರಣ ಹೊಂದಿದ** ಸದಸ್ಯರೂ ಕೂಡ ಅಧಿಕಾರ ಪ್ರಾಪ್ತಿಯ ವಿಷಯದಲ್ಲಿ ಆಸಕ್ತಿ ಹೊಂದಿರುತ್ತಾರೆ.

ಚುನಾಯಿತ, ನಾಮಕರಣ ಹೊಂದಿದ ಸದಸ್ಯರ ಪ್ರಶ್ನಾವಳಿ ಜ್ಯೋತಿಷ್ಯ ಶಾಸ್ತ್ರಕ್ಕೆ ಒಂದು ಆಹ್ವಾನವಂತಾಗಿದೆ. ಏಕೆಂದರೆ, ಈ ಪ್ರಶ್ನೆಗಳಿಗೆ ಜ್ಯೋತಿಷಿ ಉತ್ತರಿಸುವದು ಕಷ್ಟದಾಯಕವಷ್ಟೇ ಅಲ್ಲ, ಇದರಿಂದ ಅವನ ಪ್ರತಿಷ್ಟತೆಗೆ ಧಕ್ಕೆ, ಕಲಂಕ, ಬರುವ ಪ್ರಸಂಗಗಳಲ್ಲದೆ, ವ್ಯವಸಾಯವೂ ಕುಂಠಿತವಾಗುತ್ತದೆ ಇದಕ್ಕೆ ಕಾರಣವೇನಂದರೆ, ಯಾರೊಬ್ಬ ಅಭ್ಯ- ರ್ಥಿಯು ಚುನಾವಣೆಗೆ ಸ್ಪರ್ಧಿಸಬೇಕೋ, ಬೇಡವೋ, ಚುನಾವಣೆಯಲ್ಲಿ ಜಯಶಾಲಿಯಾಗುವನೋ, ಇಲ್ಲವೊ? ಎಂಬ ಪ್ರಶ್ನೆ, ಸಮಸ್ಯೆ ಕೇಳಿದರೆ ಆ ಅಭ್ಯರ್ಥಿಯ ಜಾತಕವನ್ನು ಪರಿಶೀಲಿಸಿ, ಅಥವಾ ಸ್ಪರ್ಧಾಳುಗಳ ಜಾತಕ ಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿ ಉತ್ತರಿಸುವದು ಸುಲಭವಾಗುತ್ತದೆ. ಆದರೆ ಅಧಿಕಾರಪ್ರಾಪ್ತಿಯ ವಿಷಯದ ಪ್ರಶ್ನಾವಳಿಯನ್ನು ಉತ್ತರಿಸುವದು ಆ ಸಂಸ್ಥೆಯ ಎಲ್ಲ ಬಗೆಯ ಚುನಾಯಿತ, ನಾಮಕರಣ ಹೊಂದಿದ ಎಲ್ಲ ಅಸಂಖ್ಯಾತ ಸದಸ್ಯರ ಜಾತಕಗಳನ್ನು ತುಲನಾತ್ಮಕವಾಗಿ ಪರಿಶೀಲಿಸ- ಬೇಕಾಗುತ್ತದೆ. ಇದನ್ನು ಮಾಡಬೇಕಾದರೆ ಅನೇಕ ತೊಂದರೆಗಳು ಉದ್ಭ ವಿಸುವಿಸುತ್ತವೆ. ಎಲ್ಲ ಸದಸ್ಯರ ಜಾತಕಗಳು ದೊರೆಯುವದು ತೊಂದ

ದಾಯಕ. ಕೇವಲ ಪೃಚ್ಛಕನ (ಪ್ರಶ್ನಾರ್ಥಿ) ಜಾತಕದ ಆಧಾರದ ಮೇಲೆ ಉತ್ತರ ಕೊಟ್ಟಾಗ ತಪ್ಪುವ ಸಂಭವಗಳಿರುವದಿಲ್ಲವೆಂದಲ್ಲ. ಆದರೂ ಜ್ಯೋತಿಷಿಯು ತನ್ನ ಆದ್ಯ ಕರ್ತವ್ಯದ ನಿರ್ವಹಣೆ ಮಾಡಬೇಕಾದುದರಿಂದ ಲಭಿಸುವ ವಿಷಯಗಳ ಆಧಾರದ ಮೇಲೆಯೇ ಆದಷ್ಟು "ಸರಿಯಾದ, ಸಮರ್ಪಕವಾದ ಉತ್ತರ ಕೊಡುವ ಯತ್ನ" ಮಾಡಬೇಕಾಗುತ್ತದೆ. **ಅಧಿಕಾರ ಸ್ಥಾನದ ಪ್ರಾಪ್ತಿಯ-ಯೋಗಾಯೋಗದ** ವಿಶ್ಲೇಷಣೆಗೆ ಹಾಗೂ ಈ ಬಗೆಯ ಕ್ಲಿಷ್ಟ, ಜಟಿಲ, ತೊಡಕಿನ, ಸೂಕ್ಷ್ಮ, ಸಮಸ್ಯೆಗಳನ್ನು ಪರಿಹರಿಸುವದು ಹೇಗೆ ಎಂಬುದನ್ನು ಪರಿಶೀಲಿಸುವಾ.

ಈ ಮೇಲಿನ ಸಮಸ್ಯೆಗಳಿಗೆ ಉತ್ತರ ಕೊಡಲು ಎರಡು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ಒಂದು, ಮೂಲ ಜಾತಕದಲ್ಲಿ ಅಧಿಕಾರ ಪ್ರಾಪ್ತಿಯ ಅರ್ಥಾತ್ ಆಡಳಿತಕಾರಕ ಗ್ರಹ,ಸ್ಥಾನ, ಯೋಗಗಳು ಪೂರಕವಿದಿಯೋ ಹೇಗೆ? ಎರಡು, ಗೋಚರಿಯಿಂದ ಅನುಕೂಲ ಕಾಲವಿದೆಯೋ ಹೇಗೆ? ಈ ಎರಡು ಸಂಗತಿಗಳ ಸೂಕ್ಷ್ಮಾವಲೋಕನದಿಂದ ಉತ್ತರ ಕೊಡಬೇಕಾಗುತ್ತದೆ.

**ಕಾರಕ ಗ್ರಹ :—** ಜಾತಕದಲ್ಲಿ ಅಧಿಕಾರ ಪ್ರಾಪ್ತಿ ಅಥವಾ ಆಡಳಿತಕಾರಕಗ್ರಹವೆಂದರೆ ರವಿಯು. ರವಿಯು ಬಲಾಢ್ಯನಿರದೆ ಯಾರೂ ಅಧಿಕಾರ ಪಡೆಯಲಾರರು, ಚಲಾಯಿಸಲಾರರು. ರವಿಯ ತರುವಾಯ ಗುರು, ಮಂಗಳರು ಅಧಿಕಾರ ಪ್ರಾಪ್ತಿಯ ಕಾರಕ ಗ್ರಹಗಳಿರುತ್ತಾರೆ. ಗುರು, ಮಂಗಳರು ಅಧಿಕಾರ ಕೊಡುವ ರೀತಿ ಹಾಗೂ ರವಿಯು ಅಧಿಕಾರ ಕೊಡುವ ರೀತಿಯಲ್ಲಿ ವಿಭಿನ್ನತೆ ಇರುತ್ತದೆ. ಮಂಗಳನು ಬಲಾಢ್ಯನಿದ್ದ ವ್ಯಕ್ತಿಗಳು ತಮ್ಮ ಸ್ವಸಾಮರ್ಥ್ಯದಿಂದಲೂ ಪರಾಕ್ರಮ-ಪ್ರಯತ್ನದಿಂದಲೂ ಅಧಿಕಾರ ಪಡೆಯುವರು ಎನ್ನುವದಕ್ಕಿಂತ ಅಧಿಕಾರ ಸ್ಥಾನವನ್ನು ಕಸೆದುಕೊಳ್ಳುವರು. ಇಲ್ಲವೇ, ಆಕ್ರಮಿಸಿ ಅಧಿಕಾರ ಚಲಾಯಿಸುವರು.

ಗುರುವು ಬಲಾಢ್ಯನಿದ್ದ ವ್ಯಕ್ತಿಗಳು ತಮ್ಮ ಘನತೆ, ನೀತಿಗಳಿಂದಲೂ, ವಿದ್ಯೆ ಬುದ್ಧಿಗಳಿಂದಲೂ ಕಾರ್ಯ ನಿರ್ವಹಿಸುವ ರೀತಿಯಿಂದಲೂ ಅಧಿಕಾರ ಪಡೆಯುವರು. ಆದರೆ ಅಧಿಕಾರ ಚಲಾಯಿಸಲಾರರು.

ಬುಧ, ಶುಕ್ರ, ಶನಿ, ಚಂದ್ರರು ಬಲಾಢ್ಯರಿದ್ದ ವ್ಯಕ್ತಿಗಳು ಜಾತಿ, ವರ್ಗಗಳ ಪ್ರಭಾವದಿಂದಲೂ ಪರಿಸಿತ್ಥಿಯ ಒತ್ತಡದಿಂದಲೂ ಅಧಿಕಾರ ಪ್ರಾಪ್ತಿಯಾಗುವದೇನೋ ನಿಜ. ಆದರೆ ಆ ಅಧಿಕಾರ ತಾತ್ಪೂರ್ತಿಕದ್ದಿರುತ್ತದೆ.

ರವಿಯು ಬಲಾಢ್ಯನಿದ್ದ ವ್ಯಕ್ತಿಗಳು ಸುದೈವಿಗಳಿದ್ದು ಅವರಿಗೆ ಅಧಿಕಾರ ತಾನಾಗಿಯೇ ಅವರ ಬಳಿಗೆ ಧಾವಿಸಿ ಬರುತ್ತದೆ.

**ಕಾರಕ ಲಗ್ನ:**—ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ, ಈ ಎಂಟು ಲಗ್ನಗಳು ಅಧಿಕಾರ ಪ್ರಾಪ್ತಿಯ ಕಾರಕ ಲಗ್ನಗಳಿರುತ್ತವೆ.

ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಧನು, ಮಕರ, ಕುಂಭ, ಮೀನ, ಈ ಒಂಭತ್ತು ಲಗ್ನಗಳು ಜಾತಿ, ವರ್ಗಗಳ ಪ್ರಭಾವದಿಂದಲೂ, ಪರಿಸ್ಥಿತಿಯ ಒತ್ತಡದಿಂದಲೂ ಅಧಿಕಾರ ಪ್ರಾಪ್ತಿಯ ಕಾರಕ ಲಗ್ನಗಳಿರುತ್ತವೆ.

**ಕಾರಕ ಸ್ಥಾನ:**— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ, ಭಾಗ್ಯ ಸ್ಥಾನವೇ ಕಾರಕ ಸ್ಥಾನ. ಭಾಗ್ಯಸ್ಥಾನ, ಭಾಗ್ಯೇಶ, ಪೋಷಕ, ಪೂರಕ ಇರದೆ ಯಾರಿಗೂ ಅಧಿಕಾರ ಪ್ರಾಪ್ತಿಯಾಗಲಾರದು.

ರಾಷ್ಟ್ರಪತಿ, ಉಪರಾಷ್ಟ್ರಪತಿ, ಪ್ರಧಾನ ಮಂತ್ರಿ, ಮುಖ್ಯ ಮಂತ್ರಿ, ಮಂತ್ರಿ, ಚೇರಮನ, ಅಧ್ಯಕ್ಷ, ಮೇಯರ್, ಉಪಮೇಯರ್, ಉಪಾಧ್ಯಕ್ಷ, ಉಪಕುಲಪತಿ, ಮೊದಲಾದ ಅಧಿಕಾರಸ್ಥಾನ ಪಡೆಯುವ ಸೌಭಾಗ್ಯವು ದೈವದ ಬೆಂಬಲವಿಲ್ಲದೇ ದೊರೆಯದು. ದೈವ ಇದರ, ಎರಡನೇ ಅರ್ಥ ವೆಂದರೆ ಭಾಗ್ಯಸ್ಥಾನ ಅರ್ಥಾತ್ ನವಮ ಸ್ಥಾನ ಇರುತ್ತದೆ.

ರಾಷ್ಟ್ರಪತಿ, ಉಪರಾಷ್ಟ್ರಪತಿ, ಪ್ರಧಾನಮಂತ್ರಿ ರಾಜ್ಯಪಾಲ, ಅಧ್ಯಕ್ಷ, ಮೇಯರ್, ಮೊದಲಾದ ಉಚ್ಚ ಅಧಿಕಾರಿಗಳ ಮನೆಯಲ್ಲಿ ಜನಿಸಿದರೂ ಅಧಿಕಾರಿಗಳಾಗುತ್ತಾರೆಂದು ಹೇಳಲು ಬಾರದು. ಆದುದರಿಂದ ಜಾತಕದಲ್ಲಿ

ವಿದ್ಯೆ, ಬುದ್ಧಿ, ಕರ್ತವ್ಯ, ದಕ್ಷತೆ, ಪ್ರಯತ್ನ, ಜಾತಿ, ವರ್ಗ, ಹಣ, ಇವೆಲ್ಲದಕ್ಕಿಂತಲೂ ದೈವ ಬಲವೇ ಪ್ರಧಾನ ಎಂಬುದು ನಿತ್ಯ ಜೀವನದಲ್ಲಿ ಕಾಣುತ್ತೇವೆ. ಆದುದರಿಂದ ಅಧಿಕಾರಸ್ಥಾನ ಪಡೆಯುವ ವ್ಯಕ್ತಿಗಳ ಜಾತಕದಲ್ಲಿ ಭಾಗ್ಯ, ಚತುರ್ಥ, ಲಗ್ನ, ಪಂಚಮ, ದಶಮ ಈ ಸ್ಥಾನಗಳು ಹಾಗೂ ಸ್ಥಾನಾಧೀಶರು ಪೋಷಕರಿರಬೇಕಾಗುತ್ತದೆ.

**ರಾಶಿ:–** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ, ನಿರ್ಧಿಷ್ಟ ರಾಶಿಯವರೇ ಅಧಿಕಾರ ಪಡೆಯುವರು ಎಂದು ಹೇಳಲು ಬಾರದು.

**ಯೋಗ:–** ಸುದೈವೀ ಪೂರಕ ಯೋಗಗಳು ಜಾತಕದಲ್ಲಿರಬೇಕು. ಇವುಗಳ ವಿಶ್ಲೇಷಣೆಯನ್ನು ಇದೇ ಗ್ರಂಥದ ಎರಡನೆಯ ಪ್ರಕರಣದಲ್ಲಿ 'ರಾಜಕೀಯ ಚುನಾವಣೆ' ಎಂಬ ವಿಭಾಗದ ೩೮–೩೯ ನೇ ಪುಟಗಳಲ್ಲಿ ವಿಶ್ಲೇಷಿಸಲಾಗಿದೆ.



೪

# ಚುನಾವಣೆಯ ಅನುಕೂಲ ಕಾಲ

ಚುನಾವಣೆಗೆ ನಿಲ್ಲಬೇಕಾದರೆ ಅರ್ಥಾತ್ ಸ್ಪರ್ಧಿಸಬೇಕಾದರೆ ಜಾತಕನ ಜಾತಕದಲ್ಲಿ ಗ್ರಹಗಳು ಬಲಿಷ್ಠವಾಗಿವೆಯೋ ಇಲ್ಲವೊ, ಜಾತಕನ ಮೂಲ ಜಾತಕದಲ್ಲಿ ರಾಜಕೀಯ ನಾಯಕನಾಗುವ ಗ್ರಹಯೋಗವಿದೆಯೋ, ಹೇಗೆ? ಈ ಮೊದಲಾದ ವಿಷಯಗಳನ್ನು ಪ್ರಥಮ, ದ್ವಿತೀಯ ಪ್ರಕರಣಗಳಲ್ಲಿ ಪರಿಶೀಲಿಸಿದ್ದಾಯಿತು. ಈ ಅಂಶ ಚುನಾವಣೆಯ ದೃಷ್ಟಿಯಿಂದ ಎಷ್ಟು ಮುಖ್ಯವೋ ಚುನಾವಣೆಗೆ ನಿಂತರೆ, ಸ್ಪರ್ಧಿಸಿದರೆ ಗೆಲ್ಲಲು ಸಾಧ್ಯವೋ ಎಂಬ ಅಂಶವೂ ಅಷ್ಟೇ ಮುಖ್ಯವಾದುದು. ಚುನಾವಣೆಗೆ ನಿಂತರೆ ಯಶಸ್ಸು ಲಭಿಸೀತೆ ಎಂಬ ವಿಷಯ ನಿರ್ಧರಿಸಲು ಮೂಲ ಜಾತಕದ ಪರಿಶೀಲನೆಯೊಡನೆ ಇನ್ನೂ ಮೂರು ಅಂಶಗಳನ್ನು ಪರಿಶೀಲಿಸಬೇಕಾಗುತ್ತದೆ (೧) ನಾಮಪತ್ರ ಸಲ್ಲಿಸಿದ ವೇಳೆ, ೨) ಚುನಾವಣೆ ನಡೆಯುವ ವೇಳೆ, ೩) ಫಲಿತಾಂಶ ಸಾರುವ ವೇಳೆ. ಈ ಮೂರೂ ಅಂಶಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಲು ಗೋಚರೀಗ್ರಹಗಳ ಅನಾನುಕೂಲತೆ, ದಶೆ, ಮಹರ್ದಶೆಗಳ ಅನುಕೂಲ–ಪ್ರತಿಕೂಲತೆಯ ಮೇಲಿನಿಂದ ಯಶ, ಅಪಯಶಗಳು ಆಧಾರಪಟ್ಟಿರುತ್ತದೆ. ಇಲ್ಲಿ ಚಂದ್ರಗ್ರಹದ ಪ್ರಭಾವವೂ ಬಹಳ ಮುಖ್ಯವಾದುದು. ನಾಮಪತ್ರಗಳನ್ನು ಸಲ್ಲಿಸುವಾಗ ಗೋಚರೀ ಗ್ರಹಗಳು ಹಾಗೂ ಚಂದ್ರಗ್ರಹ ಇವುಗಳ ಪ್ರಭಾವವು ಹೇಗಿದೆ ಎಂಬ ಅಂಶವನು ಪರಿಶೀಲಿಸುವಂತೆಯೋ ಇತರ ಗೋಚರೀ ಗ್ರಹಗಳು ಹಾಗೂ ಚಂದ್ರಗ್ರಹ ಚುನಾವಣೆ ನಡೆದಾಗ ಹಾಗೂ ಫಲಿತಾಂಶ ಸಾರುವ ವೇಳೆಯಲ್ಲಿ ಅನುಕೂಲವಾಗಿವೆಯೋ, ಪ್ರತಿಕೂಲವಾಗಿವೆಯೋ ಎಂಬುದನ್ನು ಪರಿಶೀಲಿಸಿ ನಿರ್ಧರಿಸಬೇಕಾಗುತ್ತದೆ.

ನಾಮಪತ್ರ ಸಲ್ಲಿಕೆಯ ಹಂತದಲ್ಲಿ ತಾಂತ್ರಿಕ ದೋಷಗಳಿಂದ ನಾಮಪತ್ರ ತಿರಸ್ಕೃತವಾಗಬಹುದು, ಅಥವಾ ಅಂಗೀಕೃತವಾದ ನಂತರವೂ

ಪರಿಸ್ಥಿತಿಗಳ ಒತ್ತಡಕ್ಕೆ ತಲೆಬಾಗಿ ಅಭ್ಯರ್ಥಿಯು ನಾಮಪತ್ರ ಹಿಂತೆಗೆದುಕೊಳ್ಳುವ ಪ್ರಸಂಗವೂ ಬರಬಹುದು. ಆದುದರಿಂದ ನಾಮಪತ್ರ ಸಲ್ಲಿಸುವ ದಿನ ಅರ್ಥಾತ್ ಮುಹೂರ್ತ ಅನುಕೂಲಕರವಾಗಿರಬೇಕಾಗಿರುತ್ತದೆ.

ನಾಮಪತ್ರ ಅಂಗೀಕೃತವಾದರೆ ಮುಂದಿನ ಹಂತವಾದ ಚುನಾವಣಾ ಕಾಲದಲ್ಲಿ, ಅದರಲ್ಲಿಯೂ ಚುನಾವಣೆಯು ನಡೆಯುವ ವೇಳೆಯಲ್ಲಿ ಮತಗಳು ಒಡೆಯುವ ಲಕ್ಷಣಗಳೂ ಇರುತ್ತವೆ. ಹಾಗೂ ಚುನಾವಣಾ ಅಧಿಕಾರಿಗಳ ಸಹಾನುಭೂತಿ ಅಥವಾ ವಕ್ರದೃಷ್ಟಿ ಇವು ಚುಣಾವಣೆಯ ವೇಳೆಯಲ್ಲಿಯೂ, ಚುನಾವಣೆಯ ನಂತರದ ಮತಗಳ ಎಣಿಕೆಯ ಹಂತದಲ್ಲಿಯೂ, ಮತಗಳ ಎಣಿಕೆಯ ಸಮಯದಲ್ಲಿಯೂ, ಚುನಾವಣಾ ಫಲಿತಾಂಶದ ಮೇಲೆ ಪ್ರಭಾವ ಬೀರುತ್ತವೆ. ಒರ್ವ ಅಭ್ಯರ್ಥಿಯ ಕಡೆಗೆ ಹೆಚ್ಚು ಮತಗಳು ಬರುತಿದ್ದು, ಇದ್ದಕ್ಕಿದ್ದಂತೆ, ವಿರೋಧಿಯ ಕಡೆಗೆ ಮತಗಳು ಹೆಚ್ಚುತ್ತ ಹೋಗುವದು, ಈ ಎಲ್ಲ ಏರು-ಪೇರುಗಳಿಗೆ ಗೋಚರೀ, ಇತರ ಗ್ರಹಗಳ ಪ್ರಭಾವ ಹಾಗೂ ಚಂದ್ರನ ಪ್ರಭಾವ ಕಾರಣಗಳಾಗಿರುತ್ತವೆ. ಆದುದರಿಂದ ಚುನಾವಣೆ ನಡೆಯುವ ದಿನ, ಫಲಿತಾಂಶ ಪ್ರಕಟವಾಗುವ ದಿನ ಅಭ್ಯರ್ಥಿಗೆ ಅನುಕೂಲವಿರಬೇಕು. ಪ್ರಸ್ತುತ ಪ್ರಕರಣದಲ್ಲಿ ಅಭ್ಯರ್ಥಿಗೆ ಚುನಾವಣೆಗೆ ಅನುಕೂಲ ಕಾಲಗಳ ವಿಶ್ಲೇಷಣೆಯನ್ನು ಮಾಡುವಾಗ ಐದು ಅಂಶಗಳನ್ನು ಪರಿಶೀಲಿಸಲಾಗಿದೆ. ೧) ಗೋಚರೀ ಗ್ರಹಗಳು ಹೇಗಿರಬೇಕು, ೨) ಚುನಾವಣೆಯ ಮೇಲೆ ಚಂದ್ರನ ಪ್ರಭಾವ. ೩) ಚುನಾವಣೆಗಳ ಮೇಲೆ ದಶೆ ಅಂತರ್ದಶೆಗಳ ಪ್ರಭಾವ. ೪) ಚುನಾವಣೆಗೆ ಸ್ಪರ್ಧಿಸಲು ಯಾರು ಯೋಗ್ಯರು, ೫) ಮುಂಬರುವ ಇಪ್ಪತ್ತು ವರುಷಗಳ ಕಾಲ ಯಾವ ರಾಶಿಯವರಿಗೆ ಅನುಕೂಲಕರವಾಗಿರುತ್ತವೆ? ಈ ಎಲ್ಲ ಐದು ಅಂಶಗಳ ವಿಶ್ಲೇಷಣೆಯನ್ನು ಈ ಪ್ರಕರಣದಲ್ಲಿ ಮಾಡಲಾಗಿದೆ.

## ೧) ಗೋಚರೀ ಗ್ರಹಗಳು ಹೇಗಿರಬೇಕು?

ಯಾರೊಬ್ಬ ಅಭ್ಯರ್ಥಿಯು ಚುನಾವಣೆಯಲ್ಲಿ ಯಶಸ್ವಿಯಾಗಲು ಹಾಗೂ ಅಧಿಕಾರಸ್ಥಾನ ಪಡೆಯಲು ಗೋಚರೀ ಗ್ರಹಗಳ ಪ್ರಭಾವ

ಬಹಳಷ್ಟು ಇರುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಅಭ್ಯರ್ಥಿಯ ಜಯಾಪಜಯ ನಿರ್ಧರಿಸುವದು ಗೋಚರೀ ಗ್ರಹಗಳು ಮುಖ್ಯ ಕಾರಣವೆಂದು ಹೇಳಿದರೆ ತಪ್ಪಾಗಲಾರದು. ಗೋಚರೀ ಗ್ರಹಗಳ ಶುಭಾಶುಭಗಳ ಸಾಮಾನ್ಯ ಫಲಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

**ರವಿ:–** ರವಿಯು ಗೋಚರಿಯಿಂದ ೩–೬–೧೦–೧೧ ನೇಯವನಾಗಿ ಬಂದರೆ, ಶುಭಫಲ ಕೊಡುವನು. ೧–೪–೮–೧೨ ಬಂದರೆ, ಅಶುಭ ಫಲ ವನ್ನುಕೊಡುವನು. ೨-೫-೭-೯ ಬಂದರೆ ಶುಭಾಶುಭ ಮಿಶ್ರಿತಫಲವನ್ನು ಕೊಡುವನು.

**ಚಂದ್ರ:-** ಚಂದ್ರನು ಗೋಚರಿಯಿಂದ ೨-೩-೫-೭-೧೧ ನೇಯವನಾಗಿ ಬಂದರೆ ಶುಭಫಲ ನೀಡುವನು. ೪-೬-೮-೧೨ ನೇಯವನಾಗಿ ಬಂದರೆ ಅಶುಭ ಫಲ ಕೊಡುವನು· ೧-೭–೧೦ ನೇಯವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನು ಕೊಡುವನು.

**ಮಂಗಳ:–** ಮಂಗಳನು ಗೋಚರಿಯಿದ ೩-೬-೧೦-೧೧ ನೇಯುವ ನಾಗಿ ಬಂದರೆ ಶುಭ ಫಲವನ್ನು, ೧–೪-೮-೧೨ ನೇಯುವನಾಗಿ ಬಂದರೆ ಅಶುಭ ಫಲವನ್ನು, ೨-೫-೭-೯ ನೇಯುವನಾಗಿ ಬಂದರೆ, ಶುಭಾಶುಭ ಮಿಶ್ರಿತ ಫಲವನ್ನು ಕೊಡುವನು.

**ಬುಧಃ–** ಬುಧನು ಗೋಚರಿಯಿಂದ ೨-೩–೫-೭-೯-೧೧ ನೇಯುವ ನಾಗಿ ಬಂದರೆ ಶುಭಫಲವನ್ನು, ೪-೬-೮-೧೨ ನೇಯುವನಾಗಿ ಬಂದರೆ ಅಶುಭ ಫಲವನ್ನು, ೧-೧೦ ನೇಯುವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನು ಕೊಡುವನು.

**ಗುರುಃ–** ಗುರುವು ಗೋಚರಿಯಿಂದ ೨-೫-೭-೯–೧೧ ನೇಯುವನಾಗಿ ಬಂದರೆ ಶುಭಫಲವನ್ನು, ೪–೬–೮––೧೨ ನೇಯುವನಾಗಿ ಬಂದರೆ ಅಶುಭ ಫಲವನ್ನು ೧–೩–೧೦ ನೇಯುವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನು ಕೊಡುವನು.

**ಶುಕ್ರ:**- ಶುಕ್ರನು ಗೋಚರಿಯಿಂದ ೧-೨-೪-೫-೭-೯-೧೧ ನೇಯವನಾಗಿ ಬಂದರೆ ಶುಭ ಫಲವನ್ನು, ೩-೬-೮ ನೇಯವನಾಗಿ ಬಂದರೆ ಅಶುಭ ಫಲವನ್ನು, ೧೦-೧೨ನೇಯವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನು ಕೊಡುವನು.

**ಶನಿ:**- ಶನಿಯು ಗೋಚರಿಯಿಂದ ೩-೬-೧೦-೧೧ ನೇಯುವನಾಗಿ ಬಂದರೆ ಶುಭ ಫಲವನ್ನು, ೧-೨-೪-೫-೮-೧೨ನೇಯುವನಾಗಿ ಬಂದರೆ ಅಶುಭ ಫಲವನ್ನು, ೭-೯ ನೇಯುವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನು ಕೊಡವನು,

**ರಾಹು - ಕೇತು:**-- ರಾಹುವಿನ ಫಲವು ಮಂಗಳನಂತೆಯೂ ಕೇತುವಿನ ಫಲವು ಶನಿಯಂತೆಯೂ ಇರುತ್ತದೆ.

**ಗೋಚರೀ ಗ್ರಹಗಳ ಪ್ರಭಾವ:**- ಚುನಾವಣೆಗೆ ಎಲ್ಲ ಗೋಚರೀ ಗ್ರಹಗಳಲ್ಲಿ ರವಿ-ಚಂದ್ರ-ಗುರು-ಶನಿ ಈ ನಾಲ್ಕು ಗ್ರಹಗಳ ಪ್ರಭಾವವು ಹೆಚ್ಚು ಪರಿಣಾಮವನ್ನುಂಟು ಮಾಡುತ್ತದೆ. ಇವುಗಳ ವಿಶ್ಲೇಷಣೆಯು ಈ ಕೆಳಗಿನಂತಿದೆ:

೧) ರವಿಯು ಗೋಚರಿಯಿಂದ ೩-೬-೧೦ ನೇಯುವನಾಗಿ ಬಂದಾಗ ಚುನಾವಣಾ ಸಿಬ್ಬಂದಿಯುವರ ಸಹಕಾರ, ಸಹಾನುಭೂತಿ ಪೂರ್ಣ ದೊರೆಯುತ್ತದೆ. ಆದರೆ ಅದೇ ರವಿಯು ೧-೪-೮-೧೨ನೇಯುವನಾಗಿದ್ದಾಗ ಚುನಾವಣಾ ಸಿಬ್ಬಂದಿಗಳ ಅಸಹಕಾರ, ವ್ಯಾಜ್ಯ, ತಂಟೆಗಳು ಉದ್ಭವಿಸುವದಲ್ಲದೇ ಮತದಾರರೂ ಸಹ ಕಡಿಮೆ ಪ್ರಮಾಣದಿಂದ ಮತ ಚಲಾಯಿಸುವರು. ಚಲಾಯಿಸಿದ ಮತಗಳು ಬಹಳಷ್ಟು ರದ್ದಾಗುವವು. ಇದಲ್ಲದೇ ಅಭ್ಯರ್ಥಿಗೆ ಶಾರೀರಿಕ ಪೀಡೆಯಿಂದ ಆತಂಕವಾಗುತ್ತದೆ. ಆದರೆ ಅದೆ ರವಿಯು ೨-೫-೯ ನೇಯುವನಾಗಿ ಬಂದರೆ ಯಶಸ್ಸೇನೋ ಕೊಡುವನು, ಆದರೆ, ಚುನಾವಣೆಯಲ್ಲಿ ಮಿತಿಮೀರಿ ಖರ್ಚು ಮಾಡುವ ಪ್ರಸಂಗ ಬರುತ್ತದೆ.

೨) ಮಂಗಳನು ಗೋಚರಿಯಿಂದ ಶುಭನಾಗಿ ಬಂದರೆ, ಪ್ರಚಂಡ ಮತಗಳಿಂದ ಯಶಸ್ಸನ್ನೂ ಅಶುಭನಾಗಿ ಬಂದರೆ ಅಪಯಶಸ್ಸನ್ನೂ ಅಲ್ಲದೆ ಮಿತ್ರರೂ ಸಹ ಶತ್ರುಗಳಾಗುತ್ತಾರೆ.

೩) ಬುಧ-ಶುಕ್ರರು ಗೋಚರಿಯಿಂದ ಶುಭದಾಯಕರಿದ್ದರೇ, ಆರ್ಥಿಕ ಸಮಸ್ಯೆ ಉಂಟಾಗದು. ಹಾಗೂ ಚುನಾವಣೆಯ ಪ್ರಚಾರರದಲ್ಲಿ ಯಶಸ್ವಿಗಳಾಗುತ್ತಾರೆ. ಆದರೆ, ಅದೇ ಬುಧ, ಶುಕ್ರರು 'ಗೋಚರಿಯಿಂದ ಅಶುಭರಾಗಿದ್ದರೆ, ಪ್ರಚಾರಕ್ಕೆ ಧಕ್ಕೆ ಬರುವದಲ್ಲದೇ ಆರ್ಥಿಕ ಅಡಚಣೆಯು ಉಂಟಾಗುತ್ತದೆ.

೪) ಗೋಚರಿಯಿಂದ ಶುಕ್ರ-ಚಂದ್ರರು ಶುಭರಾಗಿದ್ದರೆ ಮತದಾನದ ದಿನ ಸ್ತ್ರೀಯರ ಮತಗಳು ಹೆಚ್ಚು ಲಭಿಸುವವು ಹಾಗೂ ಚುನಾ-ವಣೆಯ ಪ್ರಚಾರ ಪ್ರಭಾವಿತವಾಗುವದು. ಆದರೆ, ಅದೇ ಶುಕ್ರ, ಚಂದ್ರರು ಗೋಚರಿಯಿಂದ ಅಶುಭರಾಗಿ ಬಂದರೆ, ಚುನಾವಣೆಯ ಪ್ರಚಾರದಲ್ಲಿ ತೊಂದರೆ ಉಂಟಾಗುವದಲ್ಲದೇ, ಸ್ತ್ರೀಯರ ಮತಗಳೂ ಕಡಿಮೆ ಪ್ರಮಾಣದಲ್ಲಿ ಲಭಿಸುವವು.

೫) ಗುರುವು ಗೋಚರಿಯಿಂದ ೨-೫-೭-೯-೧೧ ನೇಯವನಾಗಿ ಬಂದರೆ ಚುನಾವಣೆಯಲ್ಲಿ ಅವಿರೋಧ ಆಯ್ಕೆ ಇಲ್ಲವೇ ಪ್ರಚಂಡ ಬಹುಮತದಿಂದ ಆಯ್ಕೆಯಾಗುವರು. ಆದರೆ ಅದೇ ಗೋಚರೀ ಗುರುವು ೪-೮-೧೨ನೇಯವನಾಗಿ ಬಂದರೆ ಚುನಾವಣೆಯಲ್ಲಿ ಅಪಜಯ ಕೊಡುತ್ತಾನೆ. ಆದರಲ್ಲಿಯೂ ಅಷ್ಟಮ ಗುರುವಿದ್ದಾಗ ಸ್ಪರ್ಧಿಸಿದರೆ, ಮಿತ್ರರೇ ಶತ್ರುಗಳಾಗುತ್ತಾರೆ ಇವರಂತೆ, ಚತುರ್ಥ ಗುರುವು ಇದ್ದಾಗ ಸ್ಪರ್ಧಿಸಿದಲ್ಲಿ ಕುಟುಂಬದ ಆಪ್ತೇಷ್ಟರೇ ಶತ್ರುಗಳಂತೆ ಕೆಲಸ ಮಾಡುವರು. ಹಾಗೂ ೧೨ನೇ ಗುರುವಿದ್ದಾಗ ಸ್ಪರ್ಧಿಸಿದಲ್ಲಿ ಅಭ್ಯರ್ಥಿಯ ಶಾರೀರಿಕ ಪೀಡೆ, ಅಪಘಾತಾದಿ ದುರ್ಘಟನೆ, ಅಧಿಕಾರಿಗಳಿಂದ ತೊಂದರೆ ಮುಂತಾದ ಅಶುಭ ಘಟನೆಗಳು ಜರುಗುತ್ತವೆ.

೬) ಗೋಚರಿಯಿಂದ ಗುರುವು ೧-೩-೭ ನೇಯವನಾಗಿ ಬಂದಾಗ ಚುನಾವಣಾ ಕ್ಷೇತ್ರದಲ್ಲಿ ಬದಲಾವಣೆ ಹಾಗೂ ನಿಖರದ, ತುರುಸಿನ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

೭) ಗುರುವು ೨-೫-೯-೧೧ ನೇಯವನಿದ್ದಾಗ ಚುನಾವಣೆಯಲ್ಲಿ ಪ್ರಚಂಡ ಜಯವಿರುವದಲ್ಲದೇ ಪ್ರತಿಸ್ಪರ್ಧಿಯು ಇಡುಗಂಟೂ ಸಹ ಜಪವಾಗುವ ಸಂಭವವಿರುತ್ತದೆ.

೮) ಗೋಚರಿಯಿಂದ ಶನಿಯು ೩-೬-೧೦-೧೧ ನೇಯವನಾಗಿದ್ದಾಗ ಸ್ಪರ್ಧಿಸಿದ ಅಭ್ಯರ್ಥಿಗೆ ಅವಿರೋಧ ಆಯ್ಕೆ ಅಥವಾ ಪ್ರಚಂಡ ಮತದ ಯಶಸ್ಸಿನೊಂದಿಗೆ ಪ್ರತಿಸ್ಪರ್ಧಿಯು ಇಡುಗಂಟೂ ಜಪ್ತವಾಗುತ್ತದೆ.

೯) ಗುರುವು ಗೋಚರಿಯಿಂದ ೨-೫-೯-೧೧ ನೇಯವನಾಗಿಯೂ ಶನಿಯು ಗೋಚರಿಯಿಂದ ೩-೬-೧೦-೧೧ ನೇಯವನಾಗಿಯೂ ಬಂದಾಗ ಚುನಾವಣೆಯಲ್ಲಿ ಅವಿರೋಧ ಆಯ್ಕೆ ಇಲ್ಲವೇ ಪ್ರಚಂಡ ಮತಗಳಿಂದ ಅಭ್ಯರ್ಥಿಯು ಚುನಾಯಿತನಾಗುವನಲ್ಲದೇ ಅಧ್ಯಕ್ಷ, ಉಪಾಧ್ಯಕ್ಷ, ಪ್ರಧಾನ ಮಂತ್ರಿ, ಮುಖ್ಯಮಂತ್ರಿ, ಮಂತ್ರಿ, ಪಕ್ಷ ಸಂಸ್ಥೆಗಳ ಅಧ್ಯಕ್ಷ, ಕಾರ್ಯದರ್ಶಿ, ಕಾರ್ಯಕಾರಿ ಸಮಿತಿಗಳ ಸದಸ್ಯತ್ವ, ಮಹಾನಗರ ಸಭೆಗಳ ಮೇಯರ (ಮಹಾಪೌರ), ಅಧ್ಯಕ್ಷ, ಸ್ಥಾಯೀ (ಸ್ಟ್ಯಾಂಡಿಂಗ) ಕಮೀಟಿ ಚೇರಮನ್, ಸ್ಥಾನಿಕ ಸಂಸ್ಥೆಗಳ ಅಧಿಕಾರಿ ಸ್ಥಾನ, ಉಪಕುಲಪತಿ, ಎಲ್ಲ ವಿವಿಧ ಸಂಘ ಸಂಸ್ಥೆಗಳ ಗೌರವಸ್ಥಾನ ಪಡೆಯುವರು.

೧೦) ಚುನಾವಣೆಯಲ್ಲಿ ಗೋಚರೀ ಶನಿಯು ೧-೨-೪-೫-೮-೧೨ ನೇಯವನಾಗಿ ಬಂದರೆ ಚುನಾವಣೆಯಲ್ಲಿ ತೊಂದರೆಗಳು ಉದ್ಭವಿಸುತ್ತವೆ.

೧೧) ಗೋಚರೀ ಗುರು, ಶನಿಯರು ೪-೮-೧೨ ನೇಯವರಾಗಿ ಬಂದರೆ, ಚನಾವಣೆಯಲ್ಲಿ ಸ್ಥಳೀಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದಲ್ಲದೆ, ಚುನಾವಣೆಯ ನಂತರ ಚುನಾವಣಾ ತಂಟೆಗಳನ್ನು ಎದುರಿಸ

ಬೇಕಾಗುತ್ತದೆ. ಇದಲ್ಲದೇ ಚುನಾವಣಾ ಪೂರ್ವ ಹಾಗೂ ಚುನಾವಣೆ ನಡೆಯುವ ಕಾಲದಲ್ಲಿ ಪಕ್ಷ, ಸಂಸ್ಥೆಗಳ ಸಹಾನುಭೂತಿಗೆಎರವಾಗ ಬೇಕಾಗುತ್ತದೆ.

೧೨) ಶನಿಯು ಗೋಚರಿಯಿಂದ ೪-೮-೧೨ ನೇಯವನಾಗಿಬಂದರೆ ಸ್ವಜಾತಿಯ ಹಾಗೂ ಆಪ್ತೇಷ್ಟರ, ಇಷ್ಟಮಿತ್ರರ ಅಸಹಕಾರತ್ವವನ್ನೂ ಕಿರುಕುಳವನ್ನೂ ಎದುರಿಸಬೇಕಾಗುತ್ತದೆ.

೧೩) ಶನಿಯು ಗೋಚರಿಯಿಂದ ೧-೨-೪-೮-೧೨ನೇಯವನಾಗಿಯೂ ಗುರುವು ಗೋಚರಿಯಿಂದ ೪-೬-೮-೧೨ ನೇಯವನಾಗಿಯೂ ಇದ್ದಾಗ ಅಭ್ಯರ್ಥಿಯು ಜಾತೀಯ, ವರ್ಗದ ದ್ವೇಷವನ್ನೂ ಕಿರುಕಳವನ್ನೂ ಎದುರಿಸ ಬೇಕಾಗುತ್ತದೆ.

೧೪) ಪಂಚಮಾಷ್ಟಮ ಶನಿ, ಸಾಡೇಸಾತಿ ಇರುವ ಸಮಯದಲ್ಲಿ ಸ್ಪರ್ಧಿಸುವ ಅಭ್ಯರ್ಥಿಗೆ ಅಲ್ಪ ಸಂಖ್ಯಾಕರ, ಹಿಂದುಳಿದ ವರ್ಗದವರ, ಕಾರ್ಮಿಕರ, ಬೆಂಬಲವು ಲಭಿಸುವದಿಲ್ಲ. ಹಾಗೂ ಮತಗಳು ಕಡಿಮೆ ಸಂಖ್ಯೆಯಲ್ಲಿ ಬೀಳುವವು.

೧೫) ಗುರುವು ಗೋಚರಿಯಿಂದ ೪-೮-೧೨-೩-೬ ನೇಯವನಾಗಿ ಇದ್ದ ಸಮಯದಲ್ಲಿ ಸ್ಪರ್ಧಿಸುವ ಅಭ್ಯರ್ಥಿಗೆ ಮಠಾಧೀಶರ, ಸರಕಾರೀ ಸಿಬ್ಬಂದಿ ವರ್ಗದವರ, ಶಿಕ್ಷಕರ, ವಿದ್ಯಾರ್ಥಿಗಳ, ಅಸಹಕಾರವನ್ನೆದುರಿಸ ಬೇಕಾಗುವದಲ್ಲದೇ ಈ ವರ್ಗದ ಜನರ ಮತಗಳು ಕಡಿಮೆ ಪ್ರಮಾಣದಲ್ಲಿ ಬೀಳುತ್ತವೆ.

೧೬) ಗುರು-ಶನಿಯರು ಗೋಚರಿಯಿಂದ ಅಶುಭರಿದ್ದ ಸಮಯದಲ್ಲಿ ಚುನಾವಣಾ ತಂಟೆಗಳನ್ನು ಎದುರಿಸಬೇಕಾಗುತ್ತದೆ, ಅಥವಾ ಪಕ್ಷಾಂತರದ ಪಿಡುಗಿನಿಂದ ಅಧಿಕಾರ ಕಳೆದುಕೊಳ್ಳಬೇಕಾಗುತ್ತದೆ. ಇಲ್ಲವೇ ಪಕ್ಷ-ಸಂಸ್ಥೆಗಳ ಅಸಹಕಾರ ಎದುರಿಸಬೇಕಾಗುತ್ತದೆ.

೧೭) ಗುರು-ಶನಿಯರು ಗೋಚರಿಯಿಂದ ಶುಭರಿದ್ದರೆ, ಪ್ರತ್ಯಕ್ಷ, ಅಪ್ರತ್ಯಕ್ಷ ರೀತಿಯ ಚುನಾವಣೆಗಳಲ್ಲಿ ಯಶ ಪಡೆವು, ಇಲ್ಲವೇ ಅವಿರೋಧ ಆಯ್ಕೆಯಾಗಿ, ಅಧಿಕಾರ ಪಡೆಯುವರು. ಅದರಲ್ಲಿಯೂ ಅಪ್ರತ್ಯಕ್ಷ ರೀತಿಯಲ್ಲಿ ನಡೆಯುವ ಚುನಾವಣೆಗಳಲ್ಲಿ ಗುರು-ಶನಿಯರು ಗೋಚರಿಯಿಂದ ಶುಭರಿರಲೇಬೇಕಾಗುತ್ತದೆ.

೧೮) ಜಾತಕದಲ್ಲಿ ತ್ರಿಕೋಣ ಸ್ಥಾನಾಧೀಶರು ಬಲಾಢ್ಯರಿದ್ದು, ಗೋಚರಿಯಿಂದ ಶುಭರಿದ್ದರೆ, ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ಸನ್ನೂ ಕೇಂದ್ರ ಸ್ಥಾನಾಧೀಶರು ಬಲಾಢ್ಯರಿದ್ದು, ಗೋಚರಿಯಿಂದ ಶುಭರಿದ್ದರೆ, ನೇರ ಚುನಾವಣೆಯಲ್ಲಿಯೂ ಯಶಸ್ಸನ್ನು ಪಡೆಯುವರು.

## ೨. ಚುನಾವಣೆಯ ಮೇಲೆ ಚಂದ್ರನ ಪ್ರಭಾವ

ತೀವ್ರಗತಿಯ ಗ್ರಹವಾದ ಚಂದ್ರನ ಗೋಚರಿಯ ಪ್ರಭಾವವು ಚುನಾವಣೆಯ ಮೇಲೆ ಬಹಳಷ್ಟು ಆಗುತ್ತದೆ. ಈ ಪರಿಣಾಮವು ಅಭ್ಯರ್ಥಿಯು ನಾಮಪತ್ರ ಸಲ್ಲಿಸುವ ವೇಳೆಯ ಮೇಲೆಯೂ ಚುನಾವಣೆ ನಡೆಯುವ ವೇಳೆಯ ಮೇಲೆಯೂ ಫಲಿತಾಂಶ ಸಾರುವ ವೇಳೆಯ ಮೇಲೆಯೂ ಆಗುತ್ತದೆ.

೧) ನಾಮಪತ್ರ ಸಲ್ಲಿಸುವಾಗ ಚಂದ್ರನು ಗೋಚರಿಯಿಂದ ೨-೫-೯-೧೧ನೇಯವನಾಗಿದ್ದರೆ, ನಾಮಪತ್ರಗಳು ಯಾವುದೇತಾಂತ್ರಿಕ ದೋಷಗಳಿಲ್ಲದೇ ಸ್ವೀಕೃತವಾಗುವವು.

ಚಂದ್ರನು ೧-೩-೭-೧೦ನೇಯವನಾಗಿದ್ದಾಗ, ನಾಮಪತ್ರ ಸಲ್ಲಿಸಿದ ಅಭ್ಯರ್ಥಿಗೆ ಪರಿಸ್ಥಿತಿಗಳ ಒತ್ತಡಕ್ಕೆ ತಲೆಬಾಗಿ ನಾಮಪತ್ರ ಹಿಂತೆಗೆದು ಕೊಳ್ಳುವ ಪ್ರಸಂಗಗಳು ಬರುತ್ತವೆ.

ಚಂದ್ರನು ಗೋಚರಿಯಿಂದ ೪-೬-೮-೧೨ನೇಯವನಿದ್ದಾಗ, ನಾಮ ಪತ್ರಗಳನ್ನು ಸಲ್ಲಿಸಿದರೆ, ನಾಮಪತ್ರಗಳು ತಾಂತ್ರಿಕ ದೋಷಗಳಿಂದ

ತಿರಸ್ಕೃತವಾಗಬಹುದು; ಅಥವಾ ಚುನಾವಣಾ ಸಿಬ್ಬಂದಿಗಳ ಕಿರುಕುಳವನ್ನು ಎದುರಿಸಬೇಕಾಗುತ್ತದೆ.

೨) ಚುನಾವಣೆಯು ದಿನ ಅಭ್ಯರ್ಥಿಗಳಿಗೆ ಗೋಚರೀ ಚಂದ್ರನು ೧-೨-೫-೭-೯-೧೧ನೇಯುವನಾಗಿದ್ದರೆ, ಮತದಾರರು ಹೆಚ್ಚಿನ ಪ್ರಮಾಣದಲ್ಲಿ ಮತ ಚಲಾಯಿಸುವರು, ಆದರೆ ಅದೇ ಚಂದ್ರನು ೪-೬-೮-೧೨ನೇವನಾಗಿ ಬಂದರೆ, ಮತದಾರರು ಕಡಿಮೆ ಪ್ರಮಾಣದಲ್ಲಿ ಮತ ಚಲಾಯಿಸುವರು. ಇಲ್ಲವೇ ಚಲಾಯಿಸಿದ ಮತಗಳು ತಪ್ಪಾಗಿ ಚಲಾಯಿಸುವರು. ಇಲ್ಲವೇ ಮತಗಳು ಒಡೆದು ಪ್ರತಿಸ್ಪರ್ಧಿಗೆ ಅನುಕೂಲ ಒದಗುವ ಸಂಭವವಿರುತ್ತದೆ. ಅಥವಾ ನಿಸರ್ಗದ ಅನಾನುಕೂಲತೆಯಿಂದ ಹೆಚ್ಚಿನ ಸಂಖ್ಯೆಯಲ್ಲಿ ಮತ-ದಾರರು ಮತಗಟ್ಟೆಗೆ ಬರುವದಿಲ್ಲ. ಇದಲ್ಲದೆ ಚಂದ್ರನು ಅಶುಭನಿದ್ದಾಗ, ಚುನಾವಣಾ ಸಿಬ್ಬಂದಿಯು ಅಸಹಕಾರವನ್ನೂ ಎದುರಿಸಬೇಕಾಗುತ್ತದೆ.

೩) ಮತಗಳ ಎಣಿಕೆಯು ದಿನ ಹಾಗೂ ಫಲಿತಾಂಶ ಸಾರುವ ದಿನ ಚಂದ್ರನು ಗೋಚರಿಯಿಂದ ಶುಭನಾಗಿದ್ದರೆ, ಚುನಾವಣೆ ಸಿಬ್ಬಂದಿಗಳ ಸಹಾಯ, ಸಹಕಾರದಿಂದ ಚುನಾಯಿತನೆಂದು ಸಾರಲ್ಪಡಬಹುದು. ಇಲ್ಲವೇ, ಮತ ಎಣಿಕೆಯು ದಿನ ಚಂದ್ರನು ಅಶುಭನಾಗಿದ್ದರೆ, ಬಹಳಷ್ಟು ಚಲಾಯಿಸಿದ ಮತಗಳು ರದ್ದಾಗುವವಲ್ಲದೇ ಚುನಾವಣಾ ಸಿಬ್ಬಂದಿಗಳ ಅಸಹಕಾರವನ್ನು ಎದುರಿಸಬೇಕಾಗುತ್ತದೆ. ಮತ ಎಣಿಕೆಯು ದಿನ, ಫಲಿತಾಂಶದ ದಿನ ಗೋಚರೀ ಚಂದ್ರನು ಶುಭನಿರಲೇಬೇಕು ಎಂಬ ಅಂಶ ಬಹಳ ಮಹತ್ವದ್ದಿದೆ ಒಮ್ಮೊಮ್ಮೆ ಸ್ಪರ್ಧಿ-ಪ್ರತಿಸ್ಪರ್ಧಿಗಳಿಗೆ ಸಮ ಸಮವಾಗಿ ಮತಗಳನ್ನು ಪಡೆದಾಗ ಚುನಾವಣಾಧಿಕಾರಿ, ಚುನಾವಣಾ ನಿಯಂತ್ರಕರು, ಬಿಲ್ಲೆ ತೂರಿ, ಚೀಟಿ ಎಬ್ಬಿಸಿ, (Toss) ಮೊದಲಾದ ವಿಧಾನಗಳಿಂದ ಫಲಿತಾಂಶ ಪ್ರಕಟಗೊಳಿಸುತ್ತಾರೆ; ಅರ್ಥಾತ್ ಆಯ್ಕೆ ಸಾರುತ್ತಾರೆ. ಇದು ಅಧಿಕಾರ ಪಡೆಯುವ ಸ್ಥಾನಗಳ ಚುನಾವಣೆಗಳಿಗೆ ಬಹಳ ಮಹತ್ವದ ಅಂಶ ವಿರುವದರಿಂದ, ಮತಗಳ ಎಣಿಕೆಯು ದಿನ, ಫಲಿತಾಂಶ ಪ್ರಕಟನೆಯು ದಿನ ಗೋಚರಿಯಿಂದ ಚಂದ್ರನು ಶುಭನಿರಲೇಬೇಕು. ಉಳಿದ ಎಲ್ಲ ಗ್ರಹಗಳಿಗಿಂತ ಗೋಚರೀ ಚಂದ್ರನ ಪ್ರಭಾವ ಇಲ್ಲಿ ಹೆಚ್ಚಾಗುತ್ತದೆ.

## ೩) ಚುನಾವಣೆಗಳ ಮೇಲೆ ದಶೆ-ಅಂತರ್ದಶೆಗಳ ಪ್ರಭಾವ

ಯಾರೊಬ್ಬರು ಚುನಾವಣೆಯಲ್ಲಿ ಯಶ ಪಡೆದು ಅಧಿಕಾರ ಪ್ರಾಪ್ತಿ-ಯಾಗುವದೋ ಹೇಗೆ ಎಂದು ವಿಚಾರಿಸಿದರೆ, ನಾವು ಎರಡು ಸಂಗತಿಗಳನ್ನು ಪರಿಶೀಲಿಸಬೇಕಾಗುತ್ತದೆ. ಮೊದಲನೆಯದಾಗಿ ಅಭ್ಯರ್ಥಿಯ ಮೂಲ ಜಾತಕದಲ್ಲಿ ರಾಜಕೀಯ, ಸಾಮಾಜಿಕ ಕಾರ್ಯಕ್ಷೇತ್ರಗಳಲ್ಲಿ ಹಾಗೂ ಚುನಾವಣಾ ಸ್ಪರ್ಧೆಯಲ್ಲಿ ಸ್ಪರ್ಧಿಸುವ ರಾಜಕೀಯ ಹಾಗೂ ಚುನಾವಣೆಯ ಗ್ರಹಯೋಗ ಪೂರಕವಿದೆಯೋ ಹೇಗೆ ಎಂಬುದನ್ನು ಪರಿಶೀಲಿಸಬೇಕು. ಎರಡನೆಯದಾಗಿ ಚುನಾವಣಾ ಸಮಯದಲ್ಲಿ ಅಭ್ಯರ್ಥಿಗೆ ಅನುಕೂಲ ಕಾಲ ವಿದೆಯೋ ಹೇಗೆ ಎಂಬುದನ್ನು ಪರಿಶೀಲಿಸಬೇಕು. **ಈ ಅನುಕೂಲ ಕಾಲದ "ಕಾಲ ನಿರ್ಣಯ"** ದಲ್ಲಿ ಅನೇಕ ಪ್ರಕಾರಗಳಿವೆ. ೧) ಗೋಚರೀ ಗ್ರಹಗಳ ಬಲಾಬಲ ೨) ದಶೆ–ಮಹರ್ದಶೆಗಳ ಪ್ರಭಾವ ೩) ದಿನವರ್ಷ ಪದ್ಧತಿ ೪) ಪ್ರಾಥಮಿಕಯೋಗ ಪದ್ಧತಿ ೫) ತಾಜಿಕ ಪದ್ಧತಿ ೬) ಗೋಚರೀ ಗ್ರಹಗಳ ಪರಿಭ್ರಮಣದಿಂದಾಗುವ ಯೋಗ, ಹೀಗೆ ಕಾಲ ನಿರ್ಣಯದಲ್ಲಿ ಅನೇಕ ಪ್ರಕಾರಗಳಿದ್ದಾಗ್ಯೂ ಸಾಮಾನ್ಯವಾಗಿ ಹೆಚ್ಚು ಬಳಕೆಯಲ್ಲಿರುವವು ಎರಡು ಪದ್ಧತಿಗಳು. ಮೊದಲನೆಯದು **ಗೋಚರೀಗ್ರಹಗಳ ಪ್ರಭಾವ;** ಎರಡನೆಯದು **ಮಹರ್ದಶೆಗಳ ಪ್ರಭಾವ.** "ಗೋಚರಿ ಗ್ರಹಗಳು ಮಿನಿಟಿನ ಮುಳ್ಳು ಇದ್ದಂತಿದ್ದರೆ, ಮಹರ್ದಶೆಗಳು ತಾಸಿನ ಮುಳ್ಳುಗಳಿದ್ದಂತಿರುತ್ತವೆ". ಪ್ರಸ್ತುತ ಈ ಪ್ರಕರಣದಲ್ಲಿ ಚುನಾವಣೆಗಳ ಮೇಲೆ ದಶೆಗಳ ಪ್ರಭಾವ ಹೇಗಾಗುತ್ತದೆ ಎಂಬುದನ್ನು ಪರಿಶೀಲಿಸುವಾ.

ದಶೆ-ಅಂತರ್ದಶೆಗಳು ಅನುಕೂಲವಿದ್ದರೆ ಮಾತ್ರ, ಚುನಾವಣೆಯಲ್ಲಿ ಯಶ ದೊರೆತು ಅಧಿಕಾರ ಪ್ರಾಪ್ತಿಯಾಗುತ್ತದೆ. ಆದರೆ, ದಶಾಪದ್ಧತಿಯು ವಿಚಾರಿಸುವದು ಬಹಳ ತೊಡಕಿನ ಪ್ರಶ್ನೆ. **೪೨** ಪ್ರಕಾರದ ದಶೆಗಳಿವೆ. ಅದಕ್ಕಾಗಿ ನಾವು ಪ್ರತ್ಯೇಕವಾದ **"ದಶಾ ದರ್ಪಣ"** ಎಂಬ ಗ್ರಂಥವನ್ನು ಶೀಘ್ರದಲ್ಲಿಯೇ ಪ್ರಕಟಿಸಲಿದ್ದೇವೆ. ಪ್ರಸ್ತುತ ಈ ವಿಷಯಕ್ಕೆ ಬೇಕಾಗುವ ದಶೆ–ಮಹರ್ದಶೆಗಳನ್ನು ಮಾತ್ರ ಇಲ್ಲಿ ಕೊಡಲಾಗುವದು.

ಚುನಾವಣೆಯಲ್ಲಿ ಯಶಸ್ಸು ಪಡೆಯಲು ಹಾಗೂ ಅಧಿಕಾರ ಸ್ಥಾನ ಪಡೆಯಲು ಯಾವ ಗ್ರಹಗಳ ದಶೆಗಳು ಪೂರಕ, ಪೋಷಕವಿರುತ್ತವೆ ಎಂದು ಅನೇಕರು ಕೇಳುತ್ತಾರೆ. ಆದರೆ ನಿರ್ದಿಷ್ಟ ಗ್ರಹಗಳ ಮಹರ್ದಶೆ-ಅಂತರ್ದಶೆಗಳೇ ಪೂರಕವೂ ಪೋಷಕವೂ ಇರುತ್ತವೆ ಎಂದು ಹೇಳಲಾಗುವಂತಿಲ್ಲ. ಜಾತಕದಲ್ಲಿ ಯಾವ ಗ್ರಹಗಳು ಬಲಾಢ್ಯವಿರುವವೋ, ಯೋಗಕಾರಕವಿರುವವೋ ಆ ಗ್ರಹಗಳ ಮಹರ್ದಶೆ – ಅಂತರ್ದಶೆಗಳ ಸಮಯದಲ್ಲಿ ಚುನಾವಣೆಗಳು ನಡೆದರೆ, ಅಭ್ಯರ್ಥಿಯು ಯಶ ಪಡೆದು ಅಧಿಕಾರ ಪಡೆಯುತ್ತಾನೆ. ಇದಲ್ಲದೇ, ವಿಭಿನ್ನ ದಶೆಗಳ ಕಾಲದಲ್ಲಿಯ ಪರಿಣಾಮವೂ ಬೇರೆ ಬೇರೆ ಇದ್ದು ಅವುಗಳ ವಿವರಣೆ ಈ ಕೆಳಗಿನಂತೆ ಕೊಡಲಾಗಿದೆ.

೧) ಜಾತಕದಲ್ಲಿ ರವಿ-ಶನಿ-ಗುರು-ಮಂಗಳರು ಬಲಾಢ್ಯರಿದ್ದು, ಅವರ ಮಹರ್ದಶೆ - ಅಂತರ್ದಶೆ ನಡೆವ ಕಾಲದಲ್ಲಿ ನೇರ ಚುನಾವಣೆಯಲ್ಲಿ ಯಶ ಪಡೆದು ಅಧಿಕಾರ ಸ್ವೀಕರಿಸುತ್ತಾರೆ.

೨) ಜಾತಕತದಲ್ಲಿ ರವಿ-ಬುಧ-ಗುರು-ಶುಕ್ರ-ಚಂದ್ರರು ಬಲಾಢ್ಯರಿದ್ದು ಈ ಗ್ರಹಗಳ ಮಹರ್ದಶೆ-ಅಂತರ್ದಶೆ ನಡೆದ ಕಾಲದಲ್ಲಿ ಅಭ್ಯರ್ಥಿಯು ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶ ಪಡೆದು ಅಧಿಕಾರಸ್ಥಾನ ಗಳಿಸುತ್ತಾನೆ.

೩) ಜಾತಕದಲ್ಲಿ ಬುಧ-ಶುಕ್ರ-ರಾಹುಗಳು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಗಳಲ್ಲಿ ಚುನಾವಣೆ ನಡೆಯುತ್ತಿದ್ದರೆ ಅಭ್ಯರ್ಥಿಗೆ ಹಣಕಾಸಿನ ತೊಂದರೆ ಉಂಟಾಗದು.

೪) ಜಾತಕದಲ್ಲಿ ಗುರು-ಶುಕ್ರ-ಬುಧ-ಚಂದ್ರರು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಯಲ್ಲಿ ಚುನಾವಣೆಯು ನಡೆಯುತ್ತಿದ್ದರೆ, ಅಂಥ ಅಭ್ಯರ್ಥಿಗೆ ಪಕ್ಷ-ಸಂಸ್ಥೆಗಳ ಸಹಕಾರ ತುಂಬ ದೊರೆಯುತ್ತವೆ.

೫) ಜಾತಕದಲ್ಲಿ ಗುರು-ಶುಕ್ರ-ಬುಧ-ಚಂದ್ರರು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಗಳ ಕಾಲದಲ್ಲಿ ಚುನಾವಣೆ ನಡೆಯುತ್ತಿದ್ದರೆ,

ಪರಿಸ್ಥಿತಿಯು ಒತ್ತಡದಿಂದಾಗಲೀ ಚುನಾವಣೆಯಲ್ಲಿ ಯಶ ದೊರೆತು ಅಧಿಕಾರ ಪ್ರಾಪ್ತಿಯಾಗುತ್ತದೆ.

೬) ಜಾತಕದಲ್ಲಿ ಬುಧ-ಶುಕ್ರ-ಚಂದ್ರ-ತೃತಿಯೇಶರು ನಿರ್ಬಲರಿದ್ದು, ಚುನಾವಣಾ ಕಾಲದಲ್ಲಿ ಈ ಗ್ರಹಗಳ ದಶೆ-ಅಂತರ್ದಶೆ ನಡೆಯುತ್ತಿದ್ದರೆ, ಅಪಪ್ರಚಾರದಿಂದ ಪ್ರತಿಷ್ಟತೆಗೆ ಕುಂದು ಬರುತ್ತದೆ.

೭) ಜಾತಕದಲ್ಲಿ ಗುರು-ಶುಕ್ರ-ಚಂದ್ರ-ಚತುರ್ಥೇಶರು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಯ ಕಾಲದಲ್ಲಿ ಚುನಾವಣೆ ಇದ್ದರೆ, ಅಭ್ಯರ್ಥಿಯ ಆಯ್ಕೆ ಅವಿರೋಧವಾಗಿ ಇಲ್ಲವೇ ಪ್ರಚಂಡವಾಗಿ ಆಗುತ್ತದೆ.

೮) ಜಾತಕದಲ್ಲಿ ರವಿ-ಚಂದ್ರರು ನಿರ್ಬಲರಿದ್ದು, ಅವರ ದಶೆ-ಮಹರ್ದಶೆಯಲ್ಲಿ ಚುನಾವಣಾ ತಂಟೆ ಉದ್ಭವಿಸಿದರೆ, ಅಭ್ಯರ್ಥಿಯ ಆಯ್ಕೆ ರದ್ದಾಗುತ್ತದೆ, ಆದರೆ ರವಿ-ಚಂದ್ರರು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆ ಕಾಲದಲ್ಲಿ ಚುನಾವಣೆ ನಡೆಯುತ್ತಿದ್ದರೆ, ಚುನಾವಣಾ ತಂಟೆಯಲ್ಲಿ ಜಯ ಲಭಿಸುತ್ತದೆ.

೯) ಬುಧ-ಚಂದ್ರರು ಜಾತಕದಲ್ಲಿ ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆ ನಡೆಯುತ್ತಿದ್ದರೆ ಅಂಥ ಅಭ್ಯರ್ಥಿಗೆ ಪಕ್ಷಾಂತರದಿಂದ ಜಯ ಲಭಿಸುತ್ತವೆ. ಆದರೆ ಅವೇ ಬುಧ-ಚಂದ್ರರು ನಿರ್ಬಲರಿದ್ದು, ಅವರ ದಶೆ-ಮಹರ್ದಶೆಯ ಕಾಲದಲ್ಲಿ ಪಕ್ಷಾಂತರದಿಂದ ಅಭ್ಯರ್ಥಿಗೆ ಹಾನಿಯಾಗುತ್ತದೆ.

೧೦) ಜಾತಕದಲ್ಲಿ ರವಿ-ಗುರು-ಶನಿಯರು ಬಲಾಢ್ಯರಿದ್ದರೆ, ಅವರ ದಶೆ-ಮಹರ್ದಶೆಯ ಕಾಲದಲ್ಲಿ ಪಕ್ಷ-ಸಂಸ್ಥೆಗಳ ಅಧ್ಯಕ್ಷ, ಚೇರಮನ್, ಕಾರ್ಯದರ್ಶಿ, ಕಾರ್ಯಕಾರೀಮಂಡಳದ ಸದಸ್ಯತ್ವ ಮೊದಲಾದ ಪದಾಧಿಕಾರಿಗಳಲ್ಲದೆ ನಾಯಕ, ಧುರೀಣರಾಗಿ ಆಯ್ಕೆಯಾಗುತ್ತಾರೆ.

೧೧) ಜಾತಕದಲ್ಲಿ ರವಿ-ಮಂಗಳ-ಗುರು-ಶನಿಯರು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಯಲ್ಲಿ ಸ್ವಯಂರೂಪಿತ ನಾಯಕನಾಗುವನು.

೧೨) ಜಾತಕದಲ್ಲಿ ರವಿ-ಚಂದ್ರ-ಷಷ್ಠೇಶ-ಚತುರ್ಥೇಶರು ನಿರ್ಬಲರಿದ್ದು, ಅವರ ದಶೆ-ಮಹರ್ದಶೆಯಲ್ಲಿ ಚುನಾವಣೆ ತಂಟೆಗಳನ್ನು ಎದುರಿಸಬೇಕಾಗುತ್ತದೆ.

೧೩) ಜಾತಕದಲ್ಲಿ ಲಗ್ನೇಶ--ಚತುರ್ಥೇಶ-ಭಾಗ್ಯೇಶರು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಯ ಕಾಲದಲ್ಲಿ ಚುನಾವಣೆ ಇದ್ದರೆ, ಅಭ್ಯರ್ಥಿಯು ಯಶ ಪಡೆದು ಅಧಿಕಾರ ಪಡೆಯುತ್ತಾನೆ.

೧೪) ಜಾತಕದಲ್ಲಿ ಗುರು-ಶುಕ್ರ-ಚಂದ್ರ-ಚತುರ್ಥೇಶರು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಯ ಕಾಲದಲ್ಲಿ ಅಭ್ಯರ್ಥಿಗೆ, ಸಂಸ್ಥೆಯಲ್ಲಿಯೂ ಸರಕಾರದಲ್ಲಿಯೂ ಧುರೀಣತ್ವ ಲಭಿಸುತ್ತದೆ.

೧೫) ಜಾತಕದಲ್ಲಿ ಲಗ್ನೇಶ-ದಶಮೇಶ-ತೃತಿಯೇಶರು ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಯ ಕಾಲದಲ್ಲಿ ನೇರ ಚುನಾವಣೆ ಇದ್ದರೆ, ಅಭ್ಯರ್ಥಿಗೆ ಯಶ ಕಟ್ಟಿಟ್ಟದ್ದು.

೧೬) ಲಗ್ನೇಶ-ಚತುರ್ಥೇಶರು ಜಾತಕದಲ್ಲಿ ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಯಲ್ಲಿ ಚುನಾವಣೆ ಇದ್ದರೆ, ಅವರ ದಶೆ-ಮಹರ್ದಶೆ ಇದ್ದ ಕಾಲದಲ್ಲಿ ಅಪ್ರತ್ಯಕ್ಷ ಚುನಾವಣೆ ಇದ್ದರೆ, ಯಶ ಕಟ್ಟಿಟ್ಟದ್ದು.

೧೭) ಲಗ್ನೇಶ-ಚತುರ್ಥೇಶರು ಜಾತಕದಲ್ಲಿ ಬಲಾಢ್ಯರಿದ್ದು, ಅವರ ದಶೆ-ಮಹರ್ದಶೆಯ ಕಾಲದಲ್ಲಿ ಚುನಾವಣೆ ನಡೆದರೆ, ಅಭ್ಯರ್ಥಿಗೆ ಪಕ್ಷದ-ಸಂಸ್ಥೆಯ ಸಹಕಾರ ಬಹಳವಿರುತ್ತದೆ.

೧೮) ಜಾತಕದಲ್ಲಿ ನಿರ್ಬಲ ಚತುರ್ಥೇಶ-ಲಗ್ನೇಶರಿದ್ದು, ಅಥವಾ-ಪಾಪಗ್ರಹಗಳು ದುರ್ಬಲರಾಗಿ ಚತುರ್ಥದಲ್ಲಿದ್ದು, ಅಂಥ ಅಭ್ಯರ್ಥಿಗೆ ಈ ಗ್ರಹಗಳ ಮಹರ್ದಶೆ - ಅಂತರ್ದಶೆಯ ಕಾಲದಲ್ಲಿ ಪಕ್ಷ-ಸಂಸ್ಥೆಗಳು ಅಭ್ಯರ್ಥಿಗೆ ಅಸಹಕಾರ ತೋರಿಸುವವು ಇಲ್ಲವೇ ಹೊರ ಹಾಕುವವು.

೧೯) ಲಗ್ನೇಶ, ಚತುರ್ಥೇಶ, ಷಷ್ಟೇಶರು ಜಾತಕದಲ್ಲಿ ನಿರ್ಬಲರಿದ್ದು, ಅವರಮುಹರ್ದಶೆ–ಅಂತರದಶೆಯು ಕಾಲದಲ್ಲಿ ಚುನಾವಣೆ ನಡೆಯುತ್ತಿದ್ದರೆ, ಅಭ್ಯರ್ಥಿಯು ಆಯ್ಕೆ ರದ್ದಾಗುತ್ತದೆ.

೨೦) ಲಗ್ನೇಶ, ಚತುರ್ಥೇಶ, ಷಷ್ಟೇಶರು ಜಾತಕದಲ್ಲಿ ಬಲಾಢ್ಯರಿದ್ದು, ಅವರ ದಶೆ – ಮುಹರ್ದಶೆಯು ಕಾಲದಲ್ಲಿ ಚುನಾವಣೆ ಇದ್ದರೆ ಅಭ್ಯರ್ಥಿಯು ಆಯ್ಕೆ ಅವಿರೋಧ ಅಥವಾ ಪ್ರಚಂಡ ಬಹುಮತದಿಂದ ಆಗುವದು ನಿಶ್ಚಿತ.

೨೧) ಜಾತಕದಲ್ಲಿ ಲಗ್ನೇಶ, ಚತುರ್ಥೇಶರು, ಬಲಾಢ್ಯರಿದ್ದು, ಅವರ ದಶೆ-ಮುಹರ್ದಶೆಯುಲ್ಲಿ ಪಕ್ಷಾಂತರದಿಂದ ಲಾಭವಾಗುತ್ತದೆ. ಲಗ್ನೇಶ-ಚತುರ್ಥೇಶರು ನಿರ್ಬಲರಿದ್ದು, ಅವರ ದಶೆ-ಮುಹರ್ದಶೆಯು ಕಾಲದಲ್ಲಿ ಚುನಾವಣೆ ಇದ್ದರೆ ಪಕ್ಷಾಂತರದಿಂದ ಹಾನಿ ನಿಶ್ಚಿತ.

೨೨) ಜಾತಕದಲ್ಲಿ ಲಗ್ನೇಶ, ಭಾಗ್ಯೇಶ, ಚತುರ್ಥೇಶ, ಪಂಚಮೇಶರು ಬಲಾಢ್ಯರಿದ್ದು, ಅವರ ದಶೆ-ಮುಹರ್ದಶೆಯು ಕಾಲದಲ್ಲಿ ಚುನಾವಣೆ ನಡೆದರೆ ಅಭ್ಯರ್ಥಿಯು ಆಯ್ಕೆ ಆಗುವದಲ್ಲದೇ ಅಧಿಕಾರ ಪ್ರಾಪ್ತಿ ನಿಶ್ಚಿತ.

## ೪. ಚುನಾವಣಾ ಸ್ಪರ್ಧೆಗೆ ಯಾರು ಯೋಗ್ಯರು ?

ಚುನಾವಣೆಗೆ ನಿಲ್ಲಲು ಯಾರು ಯೋಗ್ಯರು? ಯಾರು ಅಯೋಗ್ಯರು? ಎಂದು ನಿರ್ಧರಿಸುವದು ಮುಖ್ಯ, ಯಾರ ಜಾತಕದಲ್ಲಿ ಚುನಾವಣೆಗೆ ನಿಲ್ಲಲು ಅನುಕೂಲ ಗ್ರಹಗಳಿರುವದಿಲ್ಲವೋ ಅವರು ಚುನಾವಣೆಗೆ ಸ್ಪರ್ಧಿಸಬಾರದು. ಈ ದೃಷ್ಟಿಯಿಂದ ೧೮೮೫ ರಿಂದ ೧೯೫೫ ರ ವರೆಗೆ ಹುಟ್ಟಿದವರಲ್ಲಿ ಸಾಮಾನ್ಯವಾಗಿ ಚುನಾವಣೆಗೆ ನಿಲ್ಲಲು ಅರ್ಹರು, ಯಾರು? ಅನರ್ಹರು ಯಾರು? ಎಂಬ ವಿಶ್ಲೇಷಣೆ ಈ ಕೆಳಗಿನಂತೆ ಮಾಡಲಾಗಿದೆ.

ಮೊದಲು ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ಜನಸಿದವರು ಚುನಾವಣೆಗೆ ಸ್ಪರ್ಧಿಸಿದಲ್ಲಿ ಸುಲಭ ಯಶ ಪಡೆಯುತ್ತಾರೆ.

೧೮೯೫, ೧೮೯೬, ೧೮೯೭, ೧೮೯೯, ೧೯೦೦, ೧೯೦೩, ೧೯೦೪, ೧೯೦೫, ೧೯೦೬, ೧೯೦೭, ೧೯೦೮, ೧೯೧೧, ೧೯೧೩, ೧೯೧೪, ೧೯೧೫, ೧೯೧೬, ೧೯೧೭, ೧೯೧೯, ೧೯೨೦, ೧೯೨೩, ೧೯೨೪, ೧೯೨೫, ೧೯೨೭, ೧೯೩೧, ೧೯೩೨. ೧೯೩೩, ೧೯೩೪, ೧೯೩೫, ೧೯೩೬, ೧೯೪೩, ೧೯೪೪, ೧೯೫೩, ೧೯೫೪, ೧೯೫೫,

ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ಜನಿಸಿದವರ ಚುನಾವಣೆಗೆ ಅನೇಕ ಆತಂಕಗಳು ಉದ್ಭವಿಸಿ, ಯಶ ದೊರೆಯುವದು ಕಠಿಣವಾಗುತ್ತದೆ.

೧೮೯೮, ೧೯೦೧, ೧೯೦೨, ೧೯೦೯, ೧೯೧೦, ೧೯೧೨, ೧೯೧೮, ೧೯೨೧, ೧೯೨೨, ೧೯೨೬, ೧೯೨೮, ೧೯೨೯, ೧೯೩೦, ೧೯೩೭, ೧೯೩೮, ೧೯೩೯, ೧೯೪೦, ೧೯೪೧, ೧೯೪೨, ೧೯೪೫, ೧೯೪೬, ೧೯೪೭, ೧೯೪೮, ೧೯೪೯, ೧೯೫೦, ೧೯೫೧, ೧೯೫೨.

## ೫. ಮುಂಬರುವ ಇಪ್ಪತ್ತು ವರ್ಷಗಳ ಕಾಲ ಯಾವ ರಾಶಿಯವರಿಗೆ ಹೇಗಿದೆ ?

ಅನುಕೂಲ ಕಾಲದಲ್ಲಿ ಯಾವದೇ ಚುನಾವಣೆಗೆ ಸ್ಪರ್ಧಿಸಿದರೆ ಜಯ ಲಭಿಸುವದು ಖಂಡಿತ. ಆದುದರಿಂದ ಚುನಾವಣೆಗೆ ನಿಲ್ಲ ಬಯಸುವವರು ಯಾವಾಗಲು ಅನುಕೂಲ ಕಾಲವನ್ನೇ ಆರಿಸಲು ಬಯಸುತ್ತಾರೆ. ಈ ದೃಷ್ಟಿಯಿಂದ ಮುಂಬರುವ ಇಪ್ಪತ್ತು ವರ್ಷಗಳ ಕಾಲ ಯಾವ ಯಾವ ರಾಶಿಯವರಿಗೆ ಯಾವ ಯಾವ ಕಾಲದ ಚುನಾವಣೆಯು ಅನುಕೂಲಹಾಗೂ ಪ್ರತಿಕೂಲ ಎಂಬುದನ್ನು ಸ್ಥೂಲವಾಗಿ ಈ ಕೆಳಗಿನಂತೆ ವಿವರಿಸಲಾಗಿದೆ.

**ಮೇಷ:** ಈ ರಾಶಿಯವರು ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಯಶ ದೊರೆಯುತ್ತದೆ.

೧೯೭೨, ೧೯೭೪, ೧೯೭೬-೭೭, ೧೯೮೦, ೧೯೮೨, ೧೯೮೪, ೧೯೮೬ ೧೯೮೮-೮೯, ೧೯೯೨.

ಇದೇ ರಾಶಿಯವರು ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ, ತೊಂದರೆಗಳು ಉದ್ಭವಿಸುತ್ತವೆ ಹಾಗೂ ಚುನಾವಣೆಯಲ್ಲಿ ಯಶ ದೊರೆಯಲು ಕಠಿಣವಾಗುತ್ತದೆ.

೧೯೭೧, ೧೯೭೫, ೧೯೭೯, ೧೯೮೩, ೧೯೮೭, ೧೯೯೧.

**ವೃಷಭ :** ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಜಯ ಲಭಿಸುತ್ತದೆ.

೧೯೭೧, ೧೯೭೩, ೧೯೭೫, ೧೯೭೭-೭೮, ೧೯೮೧, ೧೯೮೩, ೧೯೮೫, ೧೯೮೭, ೧೯೮೯-೯೦

ಇದೇ ರಾಶಿಯವರು ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ, ತೊಂದರೆಗಳು ಉದ್ಭವಿಸುತ್ತವೆ. ಹಾಗೂ ಚುನಾವಣೆಯಲ್ಲಿ ಯಶ ದೊರೆಯುವದು ಕಠಿಣವಾಗುತ್ತದೆ.

೧೯೭೨, ೧೯೭೬, ೧೯೮೦, ೧೯೮೪, ೧೯೮೮, ೧೯೯೨.

**ಮಿಥುನ :** ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಯಶವು ಖಂಡಿತವಾಗಿ ದೊರೆಯುತ್ತದೆ.

೧೯೭೨, ೧೯೭೪, ೧೯೭೬, ೧೯೭೮-೭೯, ೧೯೮೨, ೧೯೮೪, ೧೯೮೬, ೧೯೮೮, ೧೯೯೦-೯೧.

ಇದೇ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ, ತೊಂದರೆಗಳು

ಉದ್ಭವಿಸುತ್ತವೆ. ಹಾಗೂ ಚುನಾವಣೆಯಲ್ಲಿ ಯಶ ದೊರೆಯುವದು ಕಠಿಣಕರ.

೧೯೭೧, ೧೯೭೩, ೧೯೭೭, ೧೯೮೧, ೧೯೮೫, ೧೯೮೯, ೧೯೯೩

**ಕರ್ಕ :** ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುಣಾವಣೆಯಲ್ಲಿ ಸ್ಪರ್ಧಿಸಿದರೆ ಯಶವು ನಿಶ್ಚಿತ.

೧೯೭೧, ೧೯೭೩, ೧೯೭೫, ೧೯೭೭, ೧೯೭೯–೮೦, ೧೯೮೩, ೧೯೮೫, ೧೯೮೭, ೧೯೮೯, ೧೯೯೧–೧೯೯೨.

ಇದೇ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ತೊಂದರೆಗಳು ಉದ್ಭವಿಸುತ್ತವೆ ಹಾಗೂ ಚುನಾವಣೆಯಲ್ಲಿ ಯಶ ದೊರೆಯುವದು ಕಠಿಣವಿರುತ್ತದೆ.

೧೯೭೪, ೧೯೭೮, ೧೯೮೨, ೧೯೮೬, ೧೯೯೦.

**ಸಿಂಹ :** ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ, ಖಂಡಿತವಾಗಿ ಯಶ ಲಭಿಸುತ್ತದೆ.

೧೯೭೨, ೧೯೭೪, ೧೯೭೬, ೧೯೭೮, ೧೯೮೦–೮೧, ೧೯೮೪, ೧೯೮೬, ೧೯೮೮, ೧೯೯೦, ೧೯೯೨–೯೩.

ಇದೇ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ತೊಂದರೆಗಳು ಉದ್ಭವಿಸಿ, ಚುನಾವಣೆಯಲ್ಲಿ ಯಶ ದೊರೆಯುವದು ಕಠಿಣವಾಗುತ್ತದೆ.

೧೯೭೧, ೧೯೭೫, ೧೯೭೯, ೧೯೮೩, ೧೯೮೫, ೧೯೮೭, ೧೯೯೧.

**ಕನ್ಯಾ :** ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಯಶವು ಖಂಡಿತವಾಗಿ ದೊರೆಯುವದು.

೧೯೭೩, ೧೯೭೫, ೧೯೭೭, ೧೯೭೯, ೧೯೮೧–೮೨, ೧೯೮೫, ೧೯೮೭, ೧೯೮೯, ೧೯೯೧, ೧೯೯೩–೯೪.

ಇದೇ ರಾಶಿಯುವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯುಬಹುದಾದ ಯಾವುದೇ ಚುನಾವಣೆಯುಲ್ಲಿ ಸ್ಪರ್ಧಿಸಿದರೆ ತೊಂದರೆಗಳ ಉದ್ಭವಿಸುತ್ತವೆ ಹಾಗೂ ಚುನಾವಣೆಯುಲ್ಲಿ ಯುಶವು ದೊರೆಯುುವದು ಕಠಿಣವಾಗುತ್ತದೆ.

೧೯೭೨, ೧೯೭೬, ೧೯೮೦, ೧೯೮೪, ೧೯೮೮, ೧೯೯೨.

**ತುಲಾ :** ಈ ರಾಶಿಯುವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯುಬಹುದಾದ ಯಾವುದೇ ಚುನಾವಣೆಯುಲ್ಲಿ ಸ್ಪರ್ಧಿಸಿದರೆ ಯುಶವು ಖಂಡಿತ ದೊರೆಯುುತ್ತದೆ.

೧೯೭೧, ೧೯೭೪, ೧೯೭೮, ೧೯೮೦, ೧೯೮೨, ೧೯೮೩, ೧೯೮೬, ೧೯೮೮, ೧೯೯೦, ೧೯೯೨, ೧೯೯೪–೯೫.

ಇದೇ ರಾಶಿಯುವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯುಬಹುದಾದ ಯಾವುದೇ ಚುನಾವಣೆಯುಲ್ಲಿ ಸ್ಪರ್ಧಿಸಿದರೆ, ತೊಂದರೆಗಳು ಉದ್ಭವಿಸುತ್ತವೆ ಹಾಗೂ ಯುಶ ದೊರೆಯುುವದು ಕಠಿಣವಾಗುತ್ತದೆ.

೧೯೭೨–೭೩, ೧೯೭೫, ೧೯೭೭, ೧೯೮೧, ೧೯೮೭, ೧೯೮೯, ೧೯೯೩.

**ವೃಶ್ಚಿಕ :** ಈ ರಾಶಿಯುವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲಿ ನಡೆಯುಬಹುದಾದ ಯಾವುದೇ ಚುನಾವಣೆಯುಲ್ಲಿ ಸ್ಪರ್ಧಿಸಿದರೆ ಯುಶವು ಖಂಡಿತ.

೧೯೭೧–೭೨, ೧೯೭೫, ೧೯೭೭, ೧೯೭೯, ೧೯೮೧, ೧೯೮೩–೮೪, ೧೯೮೭, ೧೯೮೯ ೧೯೯೧, ೧೯೯೩, ೧೯೯೫–೯೬.

ಇದೇ ರಾಶಿಯುವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯುಬಹುದಾದ ಯಾವುದೇ ಚುನಾವಣೆಯುಲ್ಲಿ ಸ್ಪರ್ಧಿಸಿದರೆ, ತೊಂದರೆಗಳ ಉದ್ಭವಿಸಿ, ಯುಶ ದೊರೆಯುುವದು ಕಠಿಣವಾಗುತ್ತದೆ.

೧೯೭೩-೭೪, ೧೯೭೮, ೧೯೮೨, ೧೯೮೬, ೧೯೯೦, ೧೯೯೪.

**ಧನು :** ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಯಶ ದೊರೆಯುವದು ನಿಶ್ಚಿತ.

೧೯೭೨-೭೩, ೧೯೭೬, ೧೯೭೮, ೧೯೮೧, ೧೯೮೨, ೧೯೮೪-೮೫, ೧೯೮೮, ೧೯೯೦, ೧೯೯೨, ೧೯೯೪, ೧೯೯೬-೯೭.

ಇದೇ ರಾಶಿಯವರಿಗೆ ಈ ಕೆಳಗೆ ಕೊಟ್ಟಿರುವ ವರ್ಷಗಳಲ್ಲಿ ನಡೆಯಬಹುದಾವ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ತೊಂದರೆಗಳು ಉದ್ಭವಿಸಿ, ಯಶ ದೊರೆಯುವದು ಕಠಿಣವಾಗುತ್ತದೆ.

೧೯೭೧, ೧೯೭೪-೭೫, ೧೯೭೭, ೧೯೭೯, ೧೯೮೩, ೧೯೮೭, ೧೯೯೧,

**ಮಕರ :** ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯ ಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಯಶವು ಖಂಡಿತ.

೧೯೭೧, ೧೯೭೩,-೭೪ ೧೯೭೭, ೧೯೭೯, ೧೯೮೧, ೧೯೮೩, ೧೯೮೫-೮೬, ೧೯೮೯ ೧೯೯೧, ೧೯೯೩, ೧೯೯೫.

ಇದೇ ರಾಶಿಯವರಿಗೆ ಈ ಕೆಳಗೆ ಕೊಟ್ಟಿರುವ ವರ್ಷಗಳಲ್ಲಿ ನಡೆಯಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ತೊಂದರೆಗಳು ಉದ್ಭವಿಸಿ, ಯಶ ದೊರೆಯುವದು ದುಸ್ತರವಾಗುವದು.

೧೯೭೨, ೧೯೭೬, ೧೯೮೦, ೧೯೮೪, ೧೯೮೮, ೧೯೯೨, ೧೯೯೬.

**ಕುಂಭ :** ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯ ಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಯಶವು ನಿಶ್ಚಿತ.

೧೯೭೧–೭೨, ೧೯೭೪–೭೫, ೧೯೭೮, ೧೯೮೦, ೧೯೮೨, ೧೯೮೪, ೧೯೮೬–೮೭, ೧೯೯೦, ೧೯೯೨, ೧೯೯೪, ೧೯೯೬, ೧೯೯೮.

ಇದೇ ರಾಶಿಯುವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯು ಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ ತೊಂದರೆಗಳು ಉದ್ಭವಿಸಿ, ಯಶ ದೊರೆಯುವದು ಕಠಿಣವಾಗುತ್ತದೆ.

೧೯೭೩, ೧೯೭೭, ೧೯೭೯, ೧೯೮೧, ೧೯೮೫, ೧೯೮೯, ೧೯೯೧. ೧೯೯೩.

**ಮೀನ:** ಈ ರಾಶಿಯುವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯು ಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಯಶವು ಖಂಡಿತವಾಗಿ ದೊರೆಯುತ್ತದೆ.

೧೯೭೧, ೧೯೭೩, ೧೯೭೫-೭೬, ೧೯೭೯, ೧೯೮೧, ೧೯೮೩, ೧೯೮೫, ೧೯೮೭–೮೮, ೧೯೯೧, ೧೯೯೩, ೧೯೯೫.

ಇದೇ ರಾಶಿಯುವರಿಗೆ ಈ ಕೆಳಗೆ ಕಾಣಿಸಿದ ವರ್ಷಗಳಲ್ಲಿ ನಡೆಯು ಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೆ, ತೊಂದರೆಗಳು ಉದ್ಭವಿಸಿ ಯಶ ದೊರೆಯುವದು ದುಸ್ತರವಾಗುವದು.

೧೯೭೪, ೧೯೭೮, ೧೯೮೨, ೧೯೮೬, ೧೯೯೦, ೧೯೯೪.



೫

# ಅನುಭವಿಕ ನಿಯಮಗಳು ಹಾಗೂ ಮಾದರಿ ಕುಂಡಲಿಗಳ ವಿಶ್ಲೇಷಣೆ

ಈ ಪ್ರಕರಣದಲ್ಲಿ ಎರಡು ವಿಷಯಗಳನ್ನು ವಿವೇಚಿಸಲಾಗಿದ್ದು, ಮೊದಲನೇಯದಾಗಿ ನಮ್ಮ ಅನೇಕ ವರ್ಷಗಳ ವ್ಯವಸಾಯದಿಂದ ಬಂದ ವೈಶಿಷ್ಟ್ಯ ಪೂರ್ವಕ ಕೆಲ ಅನುಭವಗಳನ್ನು ಮೊದಲು ವಿವೇಚಿಸಿ, ಆ ಬಳಿಕ ಮಾದರಿ ಕುಂಡಲಿಗಳ ವಿವೇಚನೆ ಮಾಡಲಾಗಿದೆ.

**ಅನುಭವಿಕ ನಿಯಮಗಳು**

೧) ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಈ ಎಂಟು ಲಗ್ನದವರು ನೇರ ಪ್ರಕಾರದ ಯಾವುದೇ ಚುನಾವಣೆ-ಯಲ್ಲಿ ಯಶಸ್ವಿಗಳಾಗುತ್ತಾರೆ.

೨) ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ, ಮೀನ ಈ ಎಂಟು ಲಗ್ನದವರು ಯಾವುದೇ ಪ್ರಕಾರದ ಅಪ್ರತ್ಯಕ್ಷರೀತಿಯಿಂದ ನಡೆಯುವ ಚುನಾವಣೆಗಳಲ್ಲಿ ಯಶಸ್ವಿಗಳಾಗುತ್ತಾರೆ.

೩) ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಧನು, ಮೀನ ಈ ಎಂಟು ಲಗ್ನದವರು ನೇರ ಹಾಗೂ ಅಪ್ರತ್ಯಕ್ಷ ರೀತಿಯ ಎರಡೂ ಪ್ರಕಾರದ ಚುನಾವಣೆಗಳಲ್ಲಿ ಯಶಸ್ವಿಗಳಾಗುತ್ತಾರೆ.

೪) ರವಿ, ಮಂಗಳ, ಗುರು, ಶನಿಯರು, ಬಲಾಢ್ಯರಿದ್ದರೆ, ಯಾವದೇ ಪ್ರಕಾರದ ನೇರ ಚುನಾವಣೆಯಲ್ಲಿ ಯಶಸ್ವಿಗಳಾಗುವರು.

೫) ರವಿ, ಬುಧ, ಗುರು, ಶುಕ್ರ, ಚಂದ್ರರು ಬಲಾಢ್ಯರಿದ್ದರೆ, ಯಾವುದೇ ಪ್ರಕಾರದ ಅಪ್ರತ್ಯಕ್ಷ ರೀತಿಯ ಚುನಾವಣೆಯಲ್ಲಿ ಯಶಸ್ವಿ-ಗಳಾಗುತ್ತಾರೆ.

೭) ಲಗ್ನ, ತೃತೀಯ, ದಶಮ ಸ್ಥಾನಗಳು ಪೂರಕವಿದ್ದರೆ ಯಾವುದೇ ಪ್ರಕಾರದ ನೇರ ಚುನಾವಣೆಯಲ್ಲಿ ಜಯಗಳಿಸುತ್ತಾರೆ.

೭) ಲಗ್ನ, ಚತುರ್ಥ, ಪಂಚಮ, ಈ ಸ್ಥಾನಗಳು ಪೂರಕವಿದ್ದರೆ, ಯಾವುದೇ ಪ್ರಕಾರದ ಅಪ್ರತ್ಯಕ್ಷ ಚುನಾವಣೆಯಲ್ಲಿ ಜಯವನ್ನು ನಿಶ್ಚಿತವಾಗಿ ಗಳಿಸುತ್ತಾರೆ.

೮) ಮೇಷ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ, ಕುಂಭ ಈ ಎಂಟು ರಾಶಿಯವರು ಯಾವಾಗಲೂ ಯಾವುದೇ ಪ್ರಕಾರದ ನಾಯಕರಿದ್ದು, (ಧುರೀಣರು) ಅಸಂಖ್ಯ ಅನುಯಾಯಿಗಳನ್ನು ಹಿಂಬಾಲಕರನ್ನು ಹೊಂದಿದವರಿರುತ್ತಾರೆ.

೯) ವೃಷಭ, ಕರ್ಕ, ಕನ್ಯಾ, ಮೀನ, ಈ ನಾಲ್ಕು ರಾಶಿಯವರು ಅನುಯಾಯಿ ಇರುವದೇ ಹೆಚ್ಚು, ಹಾಗೂ ಇವರು ವ್ಯಕ್ತಿ ನಿಷ್ಠೆಯುಳ್ಳವರಿದ್ದು, ಯಾರೊಬ್ಬರನ್ನು ನಾಯಕರನ್ನಾಗಿ ಆರಿಸಿಕೊಂಡರೆ ಕೊನೆಯವರೆಗೂ ಅವರನ್ನು ಹಿಂಬಾಲಿಸುವರು.

೧೦) ಬುಧ, ಶುಕ್ರ, ಚಂದ್ರರು ಬಲಾಢ್ಯರಿದ್ದ ವ್ಯಕ್ತಿಗಳು ಪ್ರಚಾರದ ಕಾರ್ಯದಲ್ಲಿ ಪಳಗಿದವರಿರುತ್ತಾರೆ.

೧೧) ಮಿಥುನ, ತುಲಾ, ಕುಂಭ, ಕರ್ಕ, ಮೀನ ಈ ಐದು ರಾಶಿಯವರು ಪ್ರಚಾರದ ಕಾರ್ಯದಲ್ಲಿ ಪ್ರವೀಣರಿರುತ್ತಾರೆ.

೧೨) ಮಿಥುನ, ವೃಶ್ಚಿಕ, ಮಕರ, ಕುಂಭ, ಈ ನಾಲ್ಕು ರಾಶಿಯವರು ಧೂರ್ತರೂ, ಚಾಣಾಕ್ಷರೂ ಇದ್ದು, ಇವರು ಯಾವಾಗಲೂ ಧುರೀಣರಿದ್ದು, ಇವರ ನೆಲೆ ತಿಳಿಯುವದೇ ಕಠಿಣವಿರುತ್ತದೆ.

೧೩) ಮೇಷ, ಸಿಂಹ, ಧನು, ಮಕರ, ಮೀನ ಈ ಐದು ರಾಶಿಯವರು ತತ್ವ, ಸಿದ್ಧಾಂತ, ನಿಷ್ಠೆಯುಳ್ಳವರಿದ್ದು, ಇವರ ಸ್ಪಷ್ಟ, ನಿಷ್ಠುರ ಮಾತುಗಳಿಂದ ಶತ್ರುಗಳನ್ನು ನಿರ್ಮಾಣ ಮಾಡಿಕೊಳ್ಳುತ್ತಾರೆ.

೧೪) ಮಿಥುನ, ತುಲಾ, ಕುಂಭ, ಕರ್ಕ, ಮೀನ ಈ ಐದು ರಾಶಿಯ ಜನರು ಅಪ್ರತ್ಯಕ್ಷ ರೀತಿಯ ಯಾವುದೇ ಚುನಾವಣೆಯಲ್ಲಿ ಜಯಶಾಲಿಗಳಾಗುತ್ತಾರೆ.

೧೫) ಮೇಷ, ವೃಷಭ, ಮಿಥುನ, ಸಿಂಹ, ಕನ್ಯಾ, ವೃಶ್ಚಿಕ, ಧನು, ಮಕರ, ಕುಂಭ. ಈ ಒಂಭತ್ತು ರಾಶಿಯವರು ಯಾವುದೇ ಪ್ರಕಾರದ ನೇರ ಚುನಾವಣೆಯಲ್ಲಿ ಯಶಸ್ವಿಗಳಾಗುತ್ತಾರೆ

೧೬) ರವಿಯು ಬಲಾಢ್ಯನಿದ್ದರೆ ಯಾವುದೇ ಪ್ರಕಾರದ ರಾಜಕೀಯ ಚುನಾವಣೆಯಲ್ಲಿಯೂ, ಗುರುವು ಬಲಾಢ್ಯನಿದ್ದರೆ ಶೈಕ್ಷಣಿಕ, ಧಾರ್ಮಿಕ ಚುನಾವಣೆಗಳಲ್ಲಿಯೂ, ಶನಿಯು ಬಲಾಢ್ಯನಿದ್ದರೆ ಸ್ಥಾನಿಕ, ಕಾರ್ಮಿಕ ಚುನಾವಣೆಗಳಲ್ಲಿಯೂ, ಬುಧ-ಶನಿಯರು ಬಲಾಢ್ಯರಿದ್ದರೆ ಸಹಕಾರೀ ಸಂಸ್ಥೆಗಳ ಚುನಾವಣೆಯಲ್ಲಿಯೂ ಶನಿ, ಶುಕ್ರ, ಬುಧರು ಬಲಾಢ್ಯರಿದ್ದರೆ ವೃತ್ತಿ, ಸೇವಾ ಸಂಸ್ಥೆಗಳ ಚುನಾವಣೆಗಳಲ್ಲಿಯೂ, ಬುಧ, ಶುಕ್ರ, ಚಂದ್ರರು ಬಲಾಢ್ಯರಿದ್ದರೆ ಕಲಾ ಸಂಸ್ಥೆಗಳ, ಸಾಹಿತ್ಯ-ಸಾಂಸ್ಕೃತಿಕ ಚುನಾವಣೆಗಳಲ್ಲಿಯೂ ವಿಜಯಿಗಳಾಗುತ್ತಾರೆ.

೧೭) ರವಿ, ಗುರುಗಳು ಬಲಾಢ್ಯರಿದ್ದರೆ ಬಲ ಪಕ್ಷದ ಧೋರಣೆಗಳ ವಿಚಾರವುಳ್ಳವರೂ ರವಿ, ಶನಿಯರು ಬಲಾಢ್ಯರಿದ್ದರೆ ಎಡ ಪಕ್ಷದ ಧೋರಣೆಗಳ ವಿಚಾರವುಳ್ಳವರೂ ಇರುತ್ತಾರೆ.

೧೮) ರವಿ, ಬುಧ, ಶುಕ್ರ, ಚಂದ್ರರು, ಬಲಾಢ್ಯರಿದ್ದರೆ ಮಧ್ಯಮ ಪಕ್ಷದ ಧೋರಣೆಯುಳ್ಳವರೂ, ರವಿ, ಮಂಗಳರು ಬಲಾಢ್ಯರಿದ್ದರೆ ಸರ್ವಾಧಿಕಾರೀ ಪ್ರವೃತ್ತಿಯವರೂ ಇರುತ್ತಾರೆ.

೧೯) ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ, ಈ ಎಂಟು ಲಗ್ನದವರು ಬಲ ಪಕ್ಷ ಧೋರಣೆ ಉಳ್ಳವರಿರುತ್ತಾರೆ,

೨೦) ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ. ಮಕರ, ಕುಂಬ, ಈ ಎಂಟು ಲಗ್ನದವರು ಎಡ ಪಕ್ಷದ ಧೋರಣೆ ಉಳ್ಳವ-ರಿರುತ್ತಾರೆ.

೨೧) ಮೇಷ, ವೃಷಭ, ಮಿಥುನ, ಕರ್ಕ. ಮಕರ ಈ ಐದು ಲಗ್ನದವರು ಮಧ್ಯಮ ಪಕ್ಷದ ಧೋರಣೆ ಉಳ್ಳವರಿರುತ್ತಾರೆ.

೨೨) ಲಗ್ನ, ಚತುರ್ಥ, ಲಗ್ನೇಶ, ಚತುರ್ಥೇಶ, ಗುರು, ಶುಕ್ರ, ಚಂದ್ರ ಈ ಏಳು ಸಂಗತಿಗಳು ಪೂರಕವಿದ್ದ ವ್ಯಕ್ತಿಗಳಿಗೆ ಪಕ್ಷದ ಸಹಾಯ ಸಹಕಾರ ಯಾವಾಗಲೂ ಲಭಿಸುವದಲ್ಲದೇ ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶಸ್ವಿಗಳಾಗುತ್ತಾರೆ.

೨೩) ಷಷ್ಠಸ್ಥಾನ, ಚತುರ್ಥಸ್ಥಾನ, ತನುಸ್ಥಾನ, ಈ ಸ್ಥಾನಗಳೂ ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿದ್ದ ವ್ಯಕ್ತಿಗಳಿಗೆ ಸ್ಪರ್ಧೆಯ, ಆಯ್ಕೆಯ ಸಮಸ್ಯೆ ಉಂಟಾಗಲಾರದು.

೨೪) ರವಿ, ಮಂಗಳ, ಶನಿ, ರಾಹು, ಕೇತು, ಈ ಐದು ಗ್ರಹಗಳಲ್ಲಿ ಯಾವದೇ ಮೂರು ಗ್ರಹಗಳು ಲಗ್ನ, ಚತುರ್ಥ, ಷಷ್ಟ ಈ ಸ್ಥಾನಗಳಲ್ಲಿದ್ದರೆ, ಪ್ರಬಲ ಸ್ಪರ್ಧೆಯನ್ನು, ನಿಕರದ ಹೊರಾಟವನ್ನು ಎದುರಿಸಬೇಕಾಗುತ್ತದೆ.

೨೫) ಗುರು-ಚಂದ್ರ, ಗುರು-ಶುಕ್ರ, ಚಂದ್ರ-ಶುಕ್ರ, ಇವರ ಯುತಿಯೋಗ, ಪ್ರತಿಯೋಗ, ಲಗ್ನ, ಚತುರ್ಥ, ಪಂಚಮ, ದಶಮ, ಭಾಗ್ಯ-ದಲ್ಲಿದ್ದರೆ ಅವಿರೋಧ ಆಯ್ಕೆ ಆಗುತ್ತವೆ.

೨೬) ಜಾತಕದಲ್ಲಿ ರವಿ, ಚತುರ್ಥೇಶ, ಷಷ್ಠೇಶರು ಬಲಾಢ್ಯರಿದ್ದ ವ್ಯಕ್ತಿಗಳಿಗೆ ಚುನಾವಣೆ ತಂಟೆ ಉದ್ಭವಿಸಿದರೂ ಜಯ ಖಂಡಿತ.

೨೭) ರವಿ, ಚಂದ್ರ, ಷಷ್ಠೇಶ, ಚತುರ್ಥೇಶರು ನಿರ್ಬಲರಿದ್ದ ವ್ಯಕ್ತಿಗಳಿಗೆ ಚುನಾವಣಾ ತಂಟೆ ಉದ್ಭವಿಸುತ್ತವೆ.

೨೮) ರವಿ, ಚಂದ್ರರು ದುರ್ಬಲರಿದ್ದು, ಶನಿಯಿಂದ ದೃಷ್ಟಿಸಲ್ಪಟ್ಟಿ-ದ್ದರೆ, ಅಥವಾ ಶನಿಯೊಂದಿಗೆ ಇದ್ದು, ಅನೇಕ ಪಾಪಗ್ರಹಗಳು ಚತುರ್ಥ ದಲ್ಲಿದ್ದರೆ, ಇಂಥ ಅಭ್ಯರ್ಥಿಗೆ ಚುನಾವಣಾ ತಂಟೆ ಎದುರಿಸಬೇಕಾಗುತ್ತದೆ.

೨೯) ಬುಧ, ಚಂದ್ರ, ಲಗ್ನೇಶ, ಚತುರ್ಥೇಶ, ಚತರ್ಥಸ್ಥಾನ, ತನುಸ್ಥಾನ ಈ ಆರು ಸಂಗತಿಗಳಲ್ಲಿ ಯಾವದೇ ನಾಲ್ಕು ಸಂಗತಿಗಳು ದೂಷಿತವಿದ್ದ ಅಭ್ಯರ್ಥಿಗಳು ಪಕ್ಷಾಂತರಗೊಳ್ಳುತ್ತಾರೆ.

೩೦) ಜಾತಕದಲ್ಲಿ ರವಿ, ಗುರು, ಶನಿ, ಮಂಗಳರು ಬಲಾಢ್ಯರಿದ್ದ ವ್ಯಕ್ತಿಗೆ ಅಧಿಕಾರ ಪ್ರಾಪ್ತಿಯಾಗುತ್ತದೆ.

೩೧) ಯೋಗಕಾರಕ ಗ್ರಹಗಳು ಸ್ಥಾನಬಲದವರಿದ್ದರೆ, ಅಧಿಕಾರ ಪ್ರಾಪ್ತಿಯಾಗುತ್ತದೆ.

೩೨) ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಎಂಟು ಲಗ್ನಗಳು ಅಧಿಕಾರ ಪ್ರಾಪ್ತಿಗೆ ಪೋಷಕವಿರುವವು.

೩೩) ಲಗ್ನೇಶ, ಚತುರ್ಥೇಶ, ಪಂಚಮೇಶ, ಭಾಗ್ಯೇಶ, ದಶಮೇಶ ಈ ಆರು ಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗಳು ಪೋಷಕವಿದ್ದ ವ್ಯಕ್ತಿಗೆ ಅಧಿಕಾರ ಪ್ರಾಪ್ತಿ ನಿಶ್ಚಿತ.

೩೪) ಗೋಚರಿಯಿಂದ ಗುರು-ಶನಿಯರು ಅನಕೂಲವಿದ್ದರೆ ಚುನಾವಣೆಯಲ್ಲಿ ಜಯಸಹಿತ ಅಧಿಕಾರ ಪ್ರಾಪ್ತಿ ಖಂಡಿತ.

೩೫) ಚುನಾವಣೆ ನಡೆಯುವ ದಿನ ರವಿ, ಚಂದ್ರರು, ಬಲಾಢ್ಯ-ರಿದ್ದರೆ, ಬಹುಸಂಖ್ಯೆಯಲ್ಲಿ ಮತದಾರರು ಬಂದು ಮತ ಚಲಾಯಿಸುವರು. ಹಾಗೂ ಮತಗಳ ರದ್ದತಿಯ ಸಂಖ್ಯೆಯು ಕಡಿಮೆ ಆಗುತ್ತದೆ.

೩೬) ನವ್ಹಂಬರ ೧೪ ರಿಂದ ಜನೇವರಿ ೧೪ರವರೆಗೆ ಹಾಗೂ ಅಗಷ್ಟ ೧೫ ರಿಂದ ಸಪ್ಟಂಬರ ೧೬ರವರೆಗೆ ಮತ್ತು ಮಾರ್ಚ ೧೫ ರಿಂದ ಮೇ ೧೫ರ ವರೆಗೆ ಜನಿಸಿದ ವ್ಯಕ್ತಿಗಳಿಗೆ ಚುನಾವಣೆಯ ಹುಚ್ಚು ಯಾವಾಗಲೂ ಇರು-ತ್ತದೆ. ಇವರು ಪಕ್ಷ, ಧೋರಣೆಗಳನ್ನು ತ್ಯಜಿಸುವರೇ ವಿನಃ ರಾಜಕೀಯ ವನ್ನಾಗಲೀ ಚುನಾವಣೆಯಲ್ಲಿ ಸ್ಪರ್ಧಿಸುವದಾಗಲೀ ಬಿಡುವದಿಲ್ಲ. ಇವರು ಹೆಚ್ಚಾಗಿ ಧುರೀಣರಿದ್ದು, ಆಯ್ಕೆಯಾಗುವದೇ ಹೆಚ್ಚು ಮತ್ತು ಜೀವನದ ಬಹುಭಾಗ ರಾಜಕೀಯದಲ್ಲಿಯೇ ಕಳೆಯುತ್ತಾರೆ.

೩೭) ಅಕ್ಟೋಬರ ೧೮ ರಿಂದ ನವ್ಹಂಬರ ೧೩ರ ವರೆಗೆ ಹಾಗೂ ಜನೇವರಿ ೧೪ ರಿಂದ ಮಾರ್ಚ ೧೫ರ ವರೆಗೆ ಜನಿಸಿದ ಅಭ್ಯರ್ಥಿಗಳಿಗೆ ಚುನಾವಣೆಯಲ್ಲಿ ವಿರೋಧ, ವಿರೋಧಿಗಳು ಬಹಳ. ಇದಲ್ಲದೇ ಪಕ್ಷದ

ಸಹಕಾರ ಅಷ್ಟೊಂದು ಲಭಿಸುವದಿಲ್ಲ. ಮತ್ತು ಇವರ ಚುನಾವಣೆಯು ತುರುಸಿನವಿದ್ದು, ಅತ್ಯಲ್ಪ ಮತಗಳಿಂದ ಆರಿಸಿ ಬರುವರು ಅಥವಾ ಸೋಲುವದೇ ಹೆಚ್ಚು. ಇವರಿಗೆ ಅಧಿಕಾರ ಪ್ರಾಪ್ತಿಯಾಗುವಲ್ಲಿ ತೊಡಕು-ಗಳು ಬಹಳ. ಇಂಥವರು ಹೆಚ್ಚಾಗಿ ಆಡಳಿತ ಪಕ್ಷಕ್ಕಿಂತ ವಿರೋಧಿ ಪಕ್ಷದಲ್ಲಿ-ರುವದೇ ಹೆಚ್ಚು.

**ಮಾದರಿಯ ಕುಂಡಲೀ (ಜಾತಕ)ಗಳು:—** ಮೊದಲನೆಯ ಪ್ರಕರಣದಲ್ಲಿ ಚುನಾವಣೆಯ ಸಮಯದಲ್ಲಿ ಬರುವ ಸಮಸ್ಯೆಗಳ ವಿಶ್ಲೇಷಣೆ ಮಾಡಿ, ಎರಡನೆಯ ಪ್ರಕರಣದಲ್ಲಿ ವಿವಿಧ ಪ್ರಕಾರದ ಚುನಾವಣೆಯಲ್ಲಿ ಸ್ಪರ್ಧಿಸುವ ಅಭ್ಯರ್ಥಿಯ ಗ್ರಹಯೋಗ ಎಂತಿರಬೇಕು? ಎಂಬುದನ್ನು ವಿವರಿಸಿದ ನಂತರ ಮೂರನೆಯ ಪ್ರಕರಣದಲ್ಲಿ ಚುನಾವಣೆಯ ಪೂರ್ವದಲ್ಲಿ ಹಾಗೂ ನಂತರದಲ್ಲಿ ಬರುವ ಸಮಸ್ಯೆಗಳನ್ನು ಹೇಗೆ ಪರಿಹರಿಸಬೇಕೆಂಬು-ದರ ವಿಶ್ಲೇಷಣೆ ಮಾಡಿದ್ದಾಯಿತು. ನಾಲ್ಕನೆಯ ಪ್ರಕರಣದಲ್ಲಿ ಚುನಾ-ವಣೆಗೆ ಸ್ಪರ್ಧಿಸಲು ಅನುಕೂಲ ಕಾಲವು ಹೇಗಿರಬೇಕೆಂಬುದನ್ನು ಪರಿ-ಶೀಲಿಸಿದ್ದಾಯಿತು. ಈ ಪುಸ್ತಕದ ಕೊನೆಯ ಪ್ರಕರಣವಾದ ಐದನೆಯ ಪ್ರಕರಣದಲ್ಲಿ ಚುನಾವಣೆಯ ವಿಷಯದಲ್ಲಿ ನಮ್ಮ ವ್ಯವಸಾಯದಿಂದ ವೈಶಿಷ್ಟ್ಯ ಪೂರ್ಣವಾಗಿ ಬಂದ ಕೆಲ ಅನುಭವಿಕ ನಿಯಮಗಳನ್ನು ವಿವರಿಸಿದ್ದಾಯಿತು. ಇನ್ನು ಈ ವಿಭಾಗದಲ್ಲಿ ಮೊದಲನೆಯ ನಾಲ್ಕು ಪ್ರಕರಣಗಳಲ್ಲಿ ಅಭ್ಯಾಸ ಮಾಡಿದ ತತ್ವಗಳನ್ನು, ಸೂತ್ರಗಳನ್ನು, ಪ್ರಯೋಗಿಸುವ ರೀತಿಯನ್ನು ಸೂಚಿಸಿ, ಮಾರ್ಗದರ್ಶನ ನೀಡಲಾಗಿದೆ. ಆದರೆ ಇಲ್ಲಿ ಬಳಸಲಾದ ಮಾದರಿಯ ಕುಂಡಲಿಗಳು ಕಲ್ಪನೆಯ ಜಾತಕಗಳಿರದೆ, ರಾಷ್ಟ್ರದ ಪ್ರಮುಖ ವ್ಯಕ್ತಿಗಳ, ರಾಜಕೀಯ ಧುರೀಣರ, ಹಾಗೂ ಪಕ್ಷ, ಸಂಘ, ಸಂಸ್ಥೆಗಳ ಜಾತಕಗಳನ್ನೇ ಮಾದರೀಯ ಜಾತಕ-ಗಳೆಂದು ಆಯ್ದು, ಇವುಗಳ ವಿಶ್ಲೇಷಣೆ ಮಾಡಲು ಯತ್ನಿಸಲಾಗಿದೆ.

**ಮಾದರಿ : ೧ ಪ್ರಧಾನಿ ಇಂದಿರಾ ಗಾಂಧೀಜಿಯವರ ಜಾತಕ.**

ದಿವಗಂತ ಪಂ. ಜವಾಹರಲಾಲ ನೆಹರೂರವರ ಏಕಮಾತ್ರ ಪುತ್ರಿ ಶ್ರೀಮತಿ ಇಂದಿರಾ ಗಾಂಧಿ ಕ್ರಿ. ಶ. ೧೯೧೭ನೇ ನವ್ಹಂಬರ ದಿನಾಂಕ ೧೯

ರಂದು ರಾತ್ರಿ ೧೧ಘ. ೧೧ಮಿ.ಕ್ಕೆ ಸರಿಯಾಗಿ ಅಲಹಾಬಾದಿನಲ್ಲಿ ಕರ್ಕ ಲಗ್ನ ಮಕರ ರಾಶಿಯಲ್ಲಿ ಜನಿಸಿದರು. ಅವರ ಜಾತಕದ ಗ್ರಹಗತಿ ಕೆಳಗಿನಂತಿವೆ.

| | | | |
|---|---|---|---|
| — | — | ಗುರು | ಕೇತು |
| — | ಶ್ರೀಮತಿ ಇಂದಿರಾ ಗಾಂಧಿಯವರ ಜಾತಕ | | ಲಗ್ನ ಶನಿ |
| ಚಂದ್ರ | | | ಮಂಗಳ |
| ಶುಕ್ರ ರಾಹು | ರವಿ ಬುಧ | — | — |

೧) ಯೋಗಕಾರಕ ಗ್ರಹಗಳಾದ ರವಿ, ಮಂಗಳ, ಗುರುಗಳು ಬಲಾಢ್ಯರಿದ್ದಾರೆ, ರವಿ-ಮಂಗಳರ ಅನ್ಯೋನ್ಯ ರಾಶಿಯೋಗವು ದ್ವಿತೀಯ, ಪಂಚಮದಲ್ಲಿಯೂ ರವಿ-ಗುರುಗಳ ಪ್ರತಿಯೋಗವೂ, ಗುರು, ಶುಕ್ರರ ಅನ್ಯೋನ್ಯ ರಾಶಿ ಯೋಗವೂ, ಗುರು-ಚಂದ್ರರ ನವಪಂಚಕ ಯೋಗವೂ ಇದ್ದುದರಿಂದ ಇವರು ಅಖಿಲ ಭಾರತ ಮಟ್ಟದ ನಾಯಕರಾಗಿದ್ದಾರೆ.

೨) ಕರ್ಕ ಲಗ್ನದ ಯೋಗಕಾರಕ ಗ್ರಹವೂ ಆ ಜನ್ಮ ನಾಯಕತ್ವದ ಪೂರಕ ಗ್ರಹವೂ ಆಗಿರುವ ರವಿಯು ಬಲಾಢ್ಯನಿರುವದ-ರಿಂದ ಇವರು ಆಜನ್ಮ ನಾಯಕರಾಗಿದ್ದಾರೆ.

೩) ಇವರ ಜಾತಕದಲ್ಲಿ ರವಿ, ಮಂಗಳರು ಬಲಾಢ್ಯರಿರುವದರಿಂದ ಸಂಘಟನಾ ಸಾಮರ್ಥ್ಯದಿಂದ, ಸ್ವಯಂ ಪ್ರತಿಭೆಯಿಂದ ನಾಯಕತ್ವದ ಸ್ಥಾನ ಪಡೆದಿದ್ದಾರೆ.

೪) ದ್ವಿತೀಯ, ಪಂಚಮ, ಭಾಗ್ಯ, ಈ ಸ್ಥಾನಗಳೂ, ಹಾಗೂ ಸ್ಥಾನಾಧೀಶರೂ ಬಲಾಢ್ಯರಿರುವದರಿಂದ ಮನೆತನದ ಸೊತ್ತಾಗಿ ಇವರು ನಾಯಕತ್ವವನ್ನು ಪಡೆದಿರುತ್ತಾರೆ.



೫) ನಾಯಕತ್ವದ ರಾಶಿಗಳಲ್ಲಿ ಒಂದಾದ ಮಕರ ರಾಶಿ ಇವರದು ಇರುವದರಿಂದ ಇವರು ನಾಯಕರಾಗಿದ್ದಾರೆ.

೬) ನಾಯಕತ್ವದ ಪೋಷಕ ಗ್ರಹಗಳಾದ ರವಿ, ಮಂಗಳ, ಗುರುಗಳು ಜಾತಕದಲ್ಲಿ ಬಲಾಢ್ಯರಿರುವದರಿಂದ ಇವರು ನಾಯಕ-ಮಣಿಗಳಾಗಿದ್ದಾರೆ.

೭) ಇಂದಿರಾ ಗಾಂಧಿಯವರದು ಕರ್ಕ ಲಗ್ನವಿರುತ್ತದೆ. ಕರ್ಕ ಲಗ್ನವು ಅಪ್ರತ್ಯಕ್ಷ, ನೇರ ಎರಡೂ ಪ್ರಕಾದರ ಚುನಾವಣೆಗಳಿಗೆ ಕಾರಕವೂ ಪೋಷಕವೂ ಇರುತ್ತದೆ. ಆದುದರಿಂದ ಎರಡೂ ಪ್ರಕಾರದ ಚುನಾವಣೆ-ಗಳಲ್ಲಿ ಇವರು ಯಶಸ್ವಿಗಳಾಗಿದ್ದಾರೆ.

೮) ಚುನಾವಣೆ ನಡೆಯುವ ಕಾಲದಲ್ಲಿ ಇವರಿಗೆ ಗೋಚರೀ ಗ್ರಹಗಳು ಅನುಕೂಲವಿದ್ದುದರಿಂದ ಇವರು ನಾಯಕರೆಂದು ಚುನಾಯಿತ ರಾಗಿದ್ದಾರೆ. **ಉದಾ:**—೧೯೬೬–೧೯೬೭ರಲ್ಲಿ ಗೋಚರಿಯಿಂದ ಏಳನೇಯ ಗುರು, ಮೂರನೇಯ ಶನಿ ಹಾಗೂ ೧೯೭೧ ರ ನಡುಗಾಲ ಚುನಾವಣೆ-ಯಲ್ಲಿ ಗೋಚರಿಯಿಂದ ೧೧ನೇ ಗುರು ಬಂದುದರಿಂದ ಇವರಿಗೂ ಇವರ ಪಕ್ಷಕ್ಕೂ ಪ್ರಚಂಡ ಬಹುಮತ ದೊರೆಯಿತು.

೯) ಇವರ ಜಾತಕದಲ್ಲಿ ಚತುರ್ಥ ಸ್ಥಾನ ದುರ್ಬಲವಿದೆ. ಚತುರ್ಥೇಶ ಶತ್ರು ಕ್ಷೇತ್ರದಲ್ಲಿದ್ದಾನೆ. ಚಂದ್ರನು ಲಗ್ನೇಶನಾಗಿ ಶನಿಯ ಅಶುಭ ದೃಷ್ಟಿಯಲ್ಲಿದ್ದಾನೆ. ಈ ಎಲ್ಲ ಕಾರಣಗಳಿಂದ ಪಕ್ಷದಿಂದ ಹೊರಗೆ ಹಾಕಲ್ಪಟ್ಟರು. ೧೯೬೯ – ೭೦ ರಲ್ಲಿ ಗೋಚರೀಯ ಚತುರ್ಥ ಶನಿಯ ಮೂಲಕ ಪಕ್ಷದ ಅಸಹಕಾರ ಅರ್ಥಾತ್ ವಿಶ್ವಾಸಕ್ಕೆ ಎರವಾಗಿದ್ದಾರೆ.

೧೦) ರವಿ, ಮಂಗಳ, ಗುರುಗಳು, ಜಾತಕದಲ್ಲಿ ಬಲಾಢ್ಯರೂ ಜನ್ಮರಾಶಿ ಮಕರರಾಶಿಯೂ ಇರುವದರಿಂದಲೂ, ಇವರು ಬೇರೆ ಪಕ್ಷ ಕಟ್ಟಲು ಶಕ್ತಿ ಉಳ್ಳವರೂ, ಅಸಂಖ್ಯಾತ ಹಿಂಬಾಲಕರನ್ನೂ ಹೊಂದಿ-ದ್ದಾರೆ.

೧೧) ಕೊನೆಯದಾಗಿ ಇವರ ಜಾತಕದಲ್ಲಿ ಗ್ರಹಗಳು ರಾಶಿ ಬಲದವರಿಗಿಂತ ಸ್ಥಾನದವರೂ ಯೋಗಕಾರಕರೂ ಇರುವದರಿಂದ ಅಧಿಕಾರ ಪ್ರಾಪ್ತಿಯಾಗಿದೆ. ಕೆಲವರು ಇವರು ಬಲ ಪಕ್ಷ ಧೋರಣೆ ಯುವರೆಂದು ಕೆಲವರು ಇವರು ಎಡ ಪಕ್ಷ ಧೋರಣೆಯುವರೆಂದೂ ಹೇಳುತ್ತಾರೆ. ಆದರೆ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಲಗ್ನ, ರಾಶಿ, ಗ್ರಹ ಇವು ಸರ್ವಾಧಿಕಾರತ್ವದ ಯೋಗಗಳೇ ಇವರ ಜಾತಕದಲ್ಲಿ ಹೆಚ್ಚಾಗಿವೆ.

**ಮಾದರಿ : ೨ ಶ್ರೀ ಮುರಾರ್ಜಿ ದೇಸಾಯಿಯವರ ಜಾತಕ**

ಶ್ರೀ ಮುರಾರ್ಜಿ ದೇಸಾಯಿಯವರು ದಿನಾಂಕ ೨೯–೨–೧೮೯೬ರಂದು ಸೂರತ್ ಜಿಲ್ಲೆಯ ಬುಲ್ಸಾಡ ಊರಲ್ಲಿ ಮಧ್ಯಾಹ್ನ ೧–೩೦ಕ್ಕೆ ಪೂರ್ವ ಚತುರ್ಥ ಚರಣದ ಸಿಂಹ ರಾಶಿಯ ಮಿಥುನ ಲಗ್ನದಲ್ಲಿ ಜನಿಸಿದ್ದಾರೆ. ಇವರ ಜಾತಕವನ್ನು ಪರಿಶೀಲಿಸಿದಾಗ ಕಂಡು ಬರುವ ಮುಖ್ಯಾಂಶಗಳ ವಿಶ್ಲೇಷಣೆ ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| — | — | — | ಲಗ್ನ |
| ರವಿ ರಾಹು | ಶ್ರೀ ಮುರಾಜಿ ದೇಸಾಯಿಯವರ ಕುಂಡಲಿ | | ಗುರು |
| ಮಂಗಳ ಬುಧ ಶುಕ್ರ | | | ಚಂದ್ರ ಕೇತು |
| — | — | ಶನಿ | — |

೧) ಇವರ ಜಾತಕದಲ್ಲಿ ಗುರು, ಶನಿ, ಮಂಗಳರು ಉಚ್ಚರಾಶಿಯ ವರಿದ್ದು, ಚಂದ್ರನು ನಾಯಕತ್ವದ ರಾಶಿಗಳಲ್ಲೊಂದಾದ ಸಿಂಹ ರಾಶಿಯಲ್ಲಿ ವಿರಾಜಿತನಾಗಿದ್ದಾನೆ. ಈ ಕಾರಣದಿಂದಲೇ ಇವರು ನಾಯಕರಿದ್ದಾರೆ. ಹಾಗೂ ನೇರ ಚುನಾವಣೆಗಳಲ್ಲಿ ಯಶಸ್ವಿಗಳಾಗಿದ್ದಾರೆ.

೨) ಇವರ ಜಾತಕದಲ್ಲಿ ಅನೇಕ ಗ್ರಹಗಳು ರಾಶಿ ಬಲದವರಿದ್ದು, ಸ್ಥಾನ ಬಲದವರಿರುವದಿಲ್ಲ. ಈ ಕಾರಣದಿಂದಾಗಿ ಇವರಿಗೆ ಅಪ್ರತ್ಯಕ್ಷ ಚುನಾವಣೆಯಲ್ಲಿ ಅಪಯಶ ಇರುವದಲ್ಲದೇ ಅಧಿಕಾರ ಪಡೆಯುವದರಲ್ಲಿ ತೊಂದರೆಯಾಗುವದು.

೩) ಇವರ ಜಾತಕದಲ್ಲಿ ರವಿಯು ನಿರ್ಬಲ (ಶತ್ರು ಕ್ಷೇತ್ರ) ಇರುವದರಿಂದ ಇವರು ದುರ್ದೈವಿಗಳು ಹಾಗೂ ಹುಟ್ಟು ರಾಜಕಾರಣಿಯಲ್ಲ.

೪) ರವಿಗಿಂತ ಗುರು, ಮಂಗಳರೇ ಇವರ ಜಾತಕದಲ್ಲಿ ಬಲಾಢ್ಯರಿರುವದರಿಂದ ಇವರು ಜನ್ಮತಹ ರಾಜಕೀಯ ಮುಂದಾಳುಗಳಲ್ಲ ಅಥವಾ ಮುಂದಾಳುತನ ಒತ್ತಾಯದಿಂದ ಇವರ ಮೇಲೆ ಹೇರಿಲ್ಲ. ಏಣಿಯ ಕೆಳಗಿನ ಮೆಟ್ಟಲದಿಂದ ಸ್ವಪ್ರಯತ್ನ, ಸಾಮರ್ಥ್ಯದಿಂದ ಏರುತ್ತ ಬಂದಿರುವರು.

೫) ಇವರ ಜಾತಕದಲ್ಲಿ ಗುರು, ಶನಿಯರು ಬಲಾಢ್ಯರಿರುವದ-ರಿಂದ ಅನುಯಾಯಿಗಳ, ಶಿಷ್ಯಮಂಡಲಿಗಳ ಸಂಖ್ಯೆ ಅಧಿಕವಿದೆ.

೬) ಇವರದು ಸಿಂಹ ರಾಶಿ ಇರುವದರಿಂದಲೂ ಮಂಗಳನು ಉಚ್ಚ ರಾಶಿಯವನಾಗಿರುವದರಿಂದಲೂ ಶನಿ, ಗುರುಗಳು ಬಲಾಢ್ಯರಿರುವದರಿಂದ ಇವರು ಹಟವಾದಿಗಳಿದ್ದು, ತಮ್ಮ ತತ್ವ, ನಿಲುಮೆ, ನೀತಿ, ಧೋರಣೆಗಳಿಗೆ ಅನುಸರಿಸುವ ಕ್ರಮಗಳಿಂದ ಕಿಂಚಿತ್ತಾದರೂ ಹಿಂದೆ ಸರಿಯುವವರಲ್ಲ. ಈ ಕಾರಣದಿಂದ ಇವರಿಗೆ ಪಕ್ಷದ ವರಿಷ್ಠಮಂಡಳದ ಬೆಂಬಲ ಸಿಗಲಿಲ್ಲ. ರವಿಯು ನೀಚನಿರುವದರಿಂದ ಸರಕಾರದ ಅರ್ಥಾತ್ ರಾಜ್ಯಗಳ ಮುಖ್ಯಮಂತ್ರಿಗಳ ಬೆಂಬಲವೂ ಸಾಕಷ್ಟು ದೊರೆತಿಲ್ಲ.

೭) ಲಗ್ನ, ಚತುರ್ಥ, ಪಂಚಮ ಸ್ಥಾನಗಳು ಹಾಗೂ ಈ ಸ್ಥಾನಾ-ಧೀಶರು ಅಷ್ಟಮ ಸ್ಥಾನದಲ್ಲಿರುವದರಿಂದ ಪಕ್ಷದ ವರಿಷ್ಠರ ಸಹಾನುಭೂತಿಗೆ ಎರವಾಗಿದ್ದಾರೆ. ಇಷ್ಟೇ ಅಲ್ಲ, ಅಪ್ರತ್ಯಕ್ಷ ಚುನಾವಣೆಗಳಲ್ಲಿಯೂ ಅಪಯಶ ಹೊಂದಿ, ಅಧಿಕಾರ ಕಳೆದುಕೊಳ್ಳಬೇಕಾಯಿತು.

೮) ೧೯೬೬-೧೯೬೭ ರಲ್ಲಿ ಗೋಚರೀ ಅಷ್ಟಮ ಶನಿಯು ಹಾಗು ೧೨ ನೇ ಗುರುವಿನ ಮೂಲಕವೂ ಇಂದಿರಾ ಗಾಂಧಿಯವರಿಂದ ಪರಾಜಿತ ರಾಗಬೇಕಾಯಿತು.

೯) ತೃತಿಯಾಧಿಪತಿಯಾದ ರವಿಯು ಶತ್ರು ಕ್ಷೇತ್ರದಲ್ಲಿರುವದ-ರಿಂದ ಸಹೋದರನಿಂದ ಚುನಾವಣೆಯಲ್ಲಿ ಸೋಲು ಹೊಂದಬೇಕಾಯಿತು.

೧೦) ಕೊನೆಯದಾಗಿ ಪಂಚಮದಲ್ಲಿ ಶನಿಯೂ ಪಂಚಮಾಧಿಪತಿ ಯಾದ ಶುಕ್ರನು ಶತ್ರುಕ್ಷೇತ್ರದಲ್ಲಿಯೂ ಇದ್ದುದರಿಂದ ಪುತ್ರನಿಂದಾಗಿ ಅಪಕೀರ್ತಿಯನ್ನು ಪಡೆಯಬೇಕಾಯಿತು.

## ಮಾದರಿ : ೭ ಡಾ. ಹರೇಕೃಷ್ಣ ಮೆಹತಾಬ ಇವರ ಜಾತಕ

ಡಾ. ಹರೇಕೃಷ್ಣ ಮೆಹತಾಬರ ಜನ್ಮ ಕುಂಡಲಿಯಲ್ಲಿಯ ಗ್ರಹ-ಯೋಗಗಳ ವಿಚಿತ್ರ ಯೋಗವಿರುವದರಿಂದ ಅವರ ರಾಜಕೀಯ ಜೀವನವೂ ವಿಚಿತ್ರ ಗತಿಯಿಂದ ಸಾಗಿರುವದೂ ಸಹಜವೇ ಇದೆ. ಇವರ ಜನ್ಮ ಇಂಗ್ಲಿಷ ಕ್ಯಾಲೆಂಡರ ಪ್ರಕಾರ ೨೧-೧೧-೧೮೯೯ನೇ ಇಸ್ವಿಯ ಅಪರಾತ್ರಿ ೧-೩೦ ಕ್ಕೆ ಸಿಂಹ ಲಗ್ನದ ಮಿಥುನ ರಾಶಿಯಲ್ಲಿ ಜನನವಾಗಿದೆ.

ಅನೇಕರು ರಾಜಕೀಯ ರಂಗದಲ್ಲಿ ಸಾಕಷ್ಟು ಕಾಲ ಸೇವೆ ಸಲ್ಲಿಸುತ್ತಿದ್ದರೂ ಮೆಹತಾಬರಂತೆ ವಿವಿಧ ಮುಖಗಳಿಂದ ಪರಿಚಿತರಾದವರು ತೀರ ಕಡಿಮೆಯೆಂದೇ ಹೇಳಬಹುದು. ೧೯೩೦ ರಲ್ಲಿ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಶ್ರೀ ಮೆಹತಾಬರು ಓಡಿಸಾದ ಮುಖ್ಯ ಮಂತ್ರಿಗಳಾದರು. ೧೯೫೦ ರಲ್ಲಿ ಕೇಂದ್ರ ಸರಕಾರದ ಅಂದರೆ ರಾಜ್ಯಮಟ್ಟದಿಂದ ಕೇಂದ್ರ ಮಂತ್ರಿಗಳಾಗಿದ್ದರೆ, ಮುಂದೆ ಐದು ವರ್ಷಗಳ ನಂತರ ಅಂದರೆ ೧೯೫೫ ರಲ್ಲಿ ಶಾಸಕಪದದಿಂದ ಪಾಲನ ಪದವಿ ಅಂದರೆ ರಾಜ್ಯಪಾಲರಾಗಿದ್ದರು. ೧೯೫೭ ರಲ್ಲಿ ಪುನಃ ಓಡಿಸಾದ ಮುಖ್ಯಮಂತ್ರಿಯಾಗಿದ್ದರು. ೧೯೬೧ ರಲ್ಲಿ ಅವಿಶ್ವಾಸಕ್ಕೆ ಪಾತ್ರರಾದರೆ, ೧೯೬೨ ರಲ್ಲಿ ಅವಿರೋಧವಾಗಿ ಆಯ್ಕೆ ಯಾದರು. ಹೀಗೆ ರಾಜಕೀಯ ರಂಗದಲ್ಲಿ ಅನೇಕ ಪಾತ್ರಗಳನ್ನು

ವಹಿಸಿದವರೂ ಅನೇಕ ಏರಿಳಿತ ಹೊಂದಿದವರೂ ಹೇಗೆ ವಿರಳವೋ ಹಾಗೇ ಅವರಂಥ ವಿಚಿತ್ರ ಜಾತಕಗಳನ್ನು ಕಾಣುವದೂ ಅಪರೂಪವೇ ಇದ್ದು, ಇದರ ವಿಶ್ಲೇಷಣೆ ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| — | — | ಕೇತು | ಚಂದ್ರ |
| — | ಡಾ. ಹರೇಕೃಷ್ಣ ಮೆಹತಾಬ ಇವರ ಜಾತಕ | | — |
| — | | | ಲಗ್ನ |
| ಶನಿ | ರವಿ, ಮಂಗಳ ಬುಧ, ಗುರು ಶುಕ್ರ, ರಾಹು | — | — |

೧) ಇವರ ಜಾತ್ರಕದ ಚತುರ್ಥದಲ್ಲಿ ಆರು ಗ್ರಹಗಳಿರುವದು ಹಾಗೂ (ಅನೇಕ ಗ್ರಹಯೋಗದ ಚತುರ್ಥಸ್ಥಾನ) ಶನಿ-ಚಂದ್ರರ ಪ್ರತಿಯೋಗ ಇರುದಲ್ಲದೇ ಇವರದು ಮಿಥುನ ರಾಶಿ ಹಾಗೂ ವೃಶ್ಚಿಕದ ಮಂಗಳ ಚತುರ್ಥ ದಲ್ಲಿರುವದು ಈ ಎಲ್ಲ ಕಾರಣಗಳಿಂದಲೇ ಇವರಷ್ಟು ಪಕ್ಷಾಂತರ ಮಾಡಿದವರು ವಿರಳ. ಪಕ್ಷವೇ ಇವರನ್ನು ಹೊರ ಹಾಕಿದರೆ, ಕೆಲವೊಮ್ಮೆ ಇವರೇ ಪಕ್ಷ ತ್ಯಾಗಮಾಡಿದ್ದಾರೆ. ಹೊಸ ಪಕ್ಷ ಕಟ್ಟಿದ್ದಾರೆ, ಪುನಃ ಮೊದಲಿನ ಪಕ್ಷಕ್ಕೆ ಕೂಡಿದ್ದಾರೆ ಪಕ್ಷದ ಅಸಹಕಾರ, ಪಕ್ಷಾಂತರದ ವಿಷಯಕ್ಕೆ ಮೆಹತಾಬರ ಜಾತಕ ಜೀವಂತ ಉದಾಹರಣೆಯಾಗಿದೆ,

೨) ೧೯೬೧ರಲ್ಲಿ ಇವರಿಗೆ ಗೋಚರಿಯಿಂದ ಅಷ್ಟಮ ಗುರು, ಹಾಗೂ ಅಷ್ಟಮ ಶನಿಯ ಮೂಲಕ ಅವಿಶ್ವಾಸ ಉಂಟಾಗಿದ್ದರೆ, ೧೯೬೨ರಲ್ಲಿ ನವಮ ಗುರು, ನವಮ ಶನಿಯ ಮೂಲಕ ಅವಿರೋಧ ಆಯ್ಕೆಯಾಗಿದ್ದಾರೆ.

೩) ಶನಿ-ಚಂದ್ರರ ಪ್ರತಿಯೋಗವು ಹಾಗೂ ದೂಷಿತ ಚತುರ್ಥ ಸ್ಥಾನವಿರುವದರಿಂದ ಯಾವುದೊಂದು ಪಕ್ಷದಲ್ಲಿ ಸ್ಥಿರವಾಗಿರಲು ಆಗಲಿಲ್ಲ.

೪) ಸಿಂಹ ಲಗ್ನ ವೃಶ್ಚಿಕ ರಾಶಿಯ ರವಿ, ಮಂಗಳ, ಗುರು, ಮಿಥುನ ರಾಶಿಯ ಚಂದ್ರ ಇವು ನಾಯಕತ್ವದ ಕಾರಕಗ್ರಹ, ಲಗ್ನ, ರಾಶಿ ಇರುವದರಿಂದ ಮೆಹತಾಬರನ್ನು ನಾಯಕರನ್ನಾಗಿ ಮಾಡಿವೆ.

**ಮಾದರಿ ೪ : ಶ್ರೀ ವಂಗಾಲಿ ಕೃಷ್ಣ ಮೆನನ್ನರ ಜಾತಕ**

ವ್ಹಿ. ಕೆ. ಕೃಷ್ಣಮೆನನ್ನರು ೩-೫-೧೮೯೬ ರಂದು ರಾತ್ರಿ ೯-೨೭ ಕ್ಕೆ ಕಾಲಿಕತ್‌ದಲ್ಲಿ ವೃಶ್ಚಿಕಲಗ್ನದ, ಮಕರ ರಾಶಿಯ ಉತ್ತರಾಷಾಢ ನಕ್ಷತ್ರ, ಚತುರ್ಥ ಚರಣದಲ್ಲಿ ಜನಿಸಿದ್ದು, ಇವರ ಜಾತಕದಲ್ಲಿಯ ಯೋಗಗಳು ಈ ಕೆಳಗಿನಂತಿವೆ.

| | | | |
|---|---|---|---|
| — | ರವಿ ಶುಕ್ರ | ಬುಧ | — |
| ಮಂಗಳ ರಾಹು | ವ್ಹಿ. ಕೆ. ಕೃಷ್ಣ ಮೆನನ್ ಇವರ ಜಾತಕ | | ಗುರು |
| ಚಂದ್ರ | | | ಕೇತು |
| — | ಲಗ್ನ | ಶನಿ | — |

೧) ಇವರಜಾತಕದ ಚತುರ್ಥದಲ್ಲಿ ಮಂಗಳ, ರಾಹುಗಳೂ, ಹಾಗೂ ಚತುರ್ಥಾಧಿಪತಿಯಾದ ಶನಿಯು ಉಚ್ಚ ರಾಶಿಯ ಹಾಗೂ ರವಿಯೊಂದಿಗೆ ಪ್ರತಿಯೋಗವನ್ನೂ ಮಾಡುತ್ತಿದ್ದಾನೆ. ಇದೇ ಕಾರಣದಿಂದ ಇವರು ವಾದಗ್ರಸ್ತ ವ್ಯಕ್ತಿಯಿದ್ದು, ಪಕ್ಷದ ಸಹಾನುಭೂತಿ, ಸಹಕಾರಗಳಿಗೆ ಯಾವಾಗಲೂ ಎರವಾಗಿದ್ದಾರೆ.

೨) ಯಾರೊಬ್ಬರೂ ಪರಕ್ಷೇತ್ರದಿಂದ ಸ್ಪರ್ಧಿಸುತ್ತಿದ್ದರೆ, ಅಂಥವರ ಜಾತಕದಲ್ಲಿ ಅನೇಕ ಗ್ರಹಗಳು ಲಗ್ನ, ವ್ಯಯ, ತೃತೀಯ, ಸಪ್ತಮ, ಭಾಗ್ಯದಲ್ಲಿರುತ್ತವೆ. ಇಲ್ಲವೆ ಗ್ರಹಗಳು ಹೆಚ್ಚಾಗಿ ಚರರಾಶಿಯಲ್ಲಿರುತ್ತವೆ.

ಮತ್ತು ಚತುರ್ಥದಲ್ಲಿ ಪಾಪಗ್ರಹಗಳು ಇರುತ್ತವೆ. ವ್ಹಿ. ಕೆ. ಕೃಷ್ಣ-ಮೆನನ್ನರ ಜಾತಕದಲ್ಲಿ ಚಂದ್ರನು ತೃತೀಯದಲ್ಲಿಯೂ ಬುಧನು ಸಪ್ತಮದಲ್ಲಿಯೂ ಗುರುವು ನವಮದಲ್ಲಿಯೂ ಶನಿಯು ವ್ಯಯದಲ್ಲಿಯೂ ಇರುವರಲ್ಲದೇ ರವಿ, ಶುಕ್ರ, ಚಂದ್ರ, ಗುರು, ಶನಿ ಈ ಐದು ಗ್ರಹಗಳು ಚರರಾಶಿಯಲ್ಲಿರುವದಲ್ಲದೇ ಚತುರ್ಥದಲ್ಲಿ ರಾಹು, ಮಂಗಳ ಈ ಎರಡು ಪಾಪಗ್ರಹಗಳಿದ್ದು, ಚತುರ್ಥೇಶನು ವ್ಯಯದಲ್ಲಿದ್ದಾನೆ. ಇದೇ ಕಾರಣದಿಂದ ಮೆನನ್ನರಿಗೆ ಪಕ್ಷದ ಅಸಹಕಾರ ಯಾವಾಗಲೂ ಇರುವದಲ್ಲದೇ ಪರ-ಕ್ಷೇತ್ರಗಳಿಂದಲೇ ಅನೇಕ ಬಾರಿ ಸ್ಪರ್ಧಿಸಿದ್ದಾರೆ. ಇಷ್ಟೇ ಅಲ್ಲ, ಇವರು ಇಂಗ್ಲಂಡಿನಲ್ಲಿ ಅನೇಕ ವರ್ಷಗಳಿದ್ದುದ್ದಲ್ಲದೇ ಅಲ್ಲಿಯ ಹಲವು ಪಕ್ಷಗಳ ಸದಸ್ಯರಿದ್ದದ್ದಲ್ಲದೇ ಲಂಡನ್ ಕಾರ್ಪೋರೇಶನ್ನಿನ ಕಾರ್ಪೊರೇಟರರ್ ಕೂಡ ಆಗಿದ್ದರು. ಸತತ ಸಂಚಾರೀ ಎಂಬ ಶಬ್ದಕ್ಕೆ ಮೆನನ್ನರ ಹೆಸರು ಅನ್ವರ್ಥಕವಾಗುತ್ತಿತ್ತು.

೩) ಇವರ ಜಾತಕದಲ್ಲಿ ರವಿ, ಗುರು, ಶನಿಯರು ಉಚ್ಚ ರಾಶಿಯುವರಾಗಿರುವರಲ್ಲದೇ ಭಾಗ್ಯೇಶ, ಪಂಚಮೇಶ, ದ್ವಿತೀಯೇಶರು ಬಲಾಢ್ಯರಿದ್ದು, ಭಾಗ್ಯದಲ್ಲಿ ಉಚ್ಚರಾಶಿಯ ಗುರುವಿದ್ದ ಮೂಲಕ ಅಧಿಕಾರ ಪ್ರಾಪ್ತಿಯು ಅನೇಕ ವರ್ಷಗಳವರೆಗಿತ್ತು.

೪) ಇವರ ಜಾತಕದ ಚತುರ್ಥದಲ್ಲಿ ಮಂಗಳ, ರಾಹುಗಳೂ, ಹಾಗೂ ಚತುರ್ಥೇಶನುವ್ಯಯದಲ್ಲಿಯೂ ಇದ್ದು ರವಿ, ಶನಿಯರ ಪ್ರತಿಯೋಗ ಷಷ್ಠ ವ್ಯಯದಲ್ಲಿದ್ದ ಕಾರಣ ಇವರು ಅಸಂಖ್ಯ ರಾಜಕೀಯ ಶತ್ರುಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ.

೫) ಲಗ್ನೇಶನು ಶತ್ರು ಕ್ಷೇತ್ರದಲ್ಲಿಯೂ, ಚತುರ್ಥದಲ್ಲಿ ಮಂಗಳ-ರಾಹುಗಳು ಇರುವದರಿಂದ ಇವರು ಅಪ್ರತ್ಯಕ್ಷ ಚುನಾವಣೆಯಲ್ಲಿ ಪರಾಜಿತರಾಗುತ್ತಾರೆ. ಆದರೆ ರವಿ, ಶನಿ, ಗುರುಗಳು ಬಲಾಢ್ಯರಿರುವದರಿಂದ ನೇರ ಚುನಾವಣೆಯಲ್ಲಿ ಯಶಸ್ವಿಯಾಗುತ್ತಾರೆ.

## ಮಾದರಿ ಕುಂಡಲಿ ೫ : ಟಿ. ಟಿ. ಕೃಷ್ಣಮಾಚಾರೀ ಅವರ ಜಾತಕ

ಇವರು ೨೬-೧೧-೧೮೯೯ನೇ ಇಸ್ವಿ ರಾತ್ರಿ ಹತ್ತು ಘಂಟೆ, ಮೂವತ್ತು ನಿಮಿಷಕ್ಕೆ ಕರ್ಕ ಲಗ್ನದ ಸಿಂಹ ರಾಶಿಯಲ್ಲಿ ಜನನವಾಗಿದೆಯೆಂದು ತಿಳಿದು ಬಂದಿದೆ.

ವ್ಯಕ್ತಿಯ ಜೀವನದಲ್ಲಿ ಒಂದೊಂದು ಘಟನೆಗಳು ಅವರವರ ಏಳಿಗೆ ಹಾಗೂ ಅವನತಿಗೆ ಕಾರಣೀಭೂತವಾಗಿರುತ್ತವೆ. ಬಾರಡೋಲೀ ಸತ್ಯಾಗ್ರಹದಿಂದ ವಲ್ಲಭಭಾಯಿ ಪಟೇಲರ ಹೆಸರು ಅಮರವಾಗಿದೆ. ಚಂಪಾರಣ್ಯದ ಬರಗಾಲವು ಬಾಬು ರಾಜೇಂದ್ರ ಪ್ರಸಾದರ ರಾಜಕೀಯ ಜೀವನಕ್ಕೆ ನಾಂದಿಯಾಯಿತು. ಸುಯೇಜ ಕಾಲುವೆಯ ಪ್ರಕರಣವು ನಾಸೇರರ ಹೆಸರನ್ನು ಬೆಳಕಿಗೆ ತಂದಿತು. ಅದೇ ಸುಯೇಜ ಕಾಲುವೆಯ ಪ್ರಕರಣವು ಅಂಥೋನಿ ಈಡನ್ನರನ್ನು ಬಲಿ ತೆಗೆದುಕೊಂಡಿತು. ಇದರಂತೆ ಚೀನಿಯರ ಆಕ್ರಮಣವು ಕೃಷ್ಣಮೆನನ್ನರನ್ನು ಆಹುತಿ ತೆಗೆದು ಕೊಂಡಿತು. ಸುವರ್ಣ ನಿಯಂತ್ರಣವು ಮುರಾರ್ಜಿಯವರ ರಾಜಕೀಯ ಜೀವನಕ್ಕೆ ಧಕ್ಕೆ ತಂದಿತು. ಹಾಗಿಯೇ ಮುಂದ್ರಾ ಪ್ರಕರಣವು ತಿರುವಳ್ಳಿ, ತಟ್ಟೈ,ಕೃಷ್ಣಮಾಚಾರಿಯವರರಾಜಕೀಯ ಜೀವನಕ್ಕೆ ಧಕ್ಕೆ ತಂದರೆ, ಭಗಲಾರವರ ರಾಜಕೀಯ ಜೀವನ ಆರಂಭವಾಯಿತು. ಈ ಘಟನೆಗಳು ಅವರವರ ಜಾತಕದ ಮೇಲಿಂದ ಜರುಗುತ್ತವೆ. ಅವು ಹೇಗೆ ಜರುಗುತ್ತವೆಂಬುದನ್ನು ಟಿ. ಟಿ. ಕೆ. ಅವರ ಜಾತಕದ ಮೇಲಿಂದ ಪರಿಶೀಲಿಸುವಾ.

| | | | |
|---|---|---|---|
| — | — | ಕೇತು | — |
| — | ಟಿ. ಟಿ. ಕೆ. ಅವರ ಜಾತಕ | | ಲಗ್ನ |
| — | | | ಚಂದ್ರ |
| ಬುಧ, ಶುಕ್ರ, ಶನಿ | ರವಿ ರಾಹು ಮಂಗಳ. ಗುರು | — | — |

೧) ಟಿ. ಟಿ. ಕೆ. ಅವರಷ್ಟು ರಾಜಕೀಯ ಜೀವನದಲ್ಲಿ ಪರಿಳಿತ ಹೊಂದಿದವರು ಯಾರೂ ಇಲ್ಲ. ೧೯೨೧ರಲ್ಲಿ ವ್ಯವಹಾರ ಕ್ಷೇತ್ರದಿಂದ ರಾಜಕೀಯ ಕ್ಷೇತ್ರ ಪ್ರವೇಶಿಸಿ, ವಿಧಾನ ಸಭೆಯ ಸದಸ್ಯರಲ್ಲದೇ ಘಟನಾ ಸಮಿತಿಯ ಸದಸ್ಯರೂ ಆದರು. ೧೯೫೨ರಲ್ಲಿ ಲೋಕಸಭೆಗೆ ಆರಿಸಿ ಬಂದು ಕೇಂದ್ರ ಮಂತ್ರಿ ಮಂಡಳ ಸೇರಿ ದೇಶಮುಖರಿಂದ ತೆರವಾದ ಆರ್ಥಿಕ ಶಾಖೆಯ ಕೆಲಸವನ್ನು ಒಳ್ಳೆಯ ದಕ್ಷತೆಯಿಂದ ನೋಡಿಕೊಂಡು ಬಂದರು. ಆದರೆ, ೧೯೫೮ರಲ್ಲಿ ಬಂದ ಗೋಚರೀ ಚತುರ್ಥ ಶನಿಯ ಪರಿಭ್ರಮಣವು ಪಂಚಮ ಸ್ಥಾನದ ಮೇಲಿನಿಂದಲೂ ರವಿ, ಮಂಗಳರ ಮೇಲಿನಿಂದಲೂ ಆದಾಗ ಮುಂದ್ರಾ ಪ್ರಕರಣದಿಂದ ಇವರ ರಾಜಕೀಯ ಜೀವನದ ಅಸ್ತಿತ್ವವನ್ನೇ ಪ್ರಶ್ನಿಸಿದ್ದರೂ ಮತ್ತೆ ೧೯೬೨ರಲ್ಲಿ ರಾಜಕೀಯ ಪ್ರವೇಶಿಸಿ ಅವಿರೋಧ ಆಯ್ಕೆ ಹೊಂದಿದರು. ಮುಂದೆ, ನೆಹರೂರವರ ತೃತೀಯ ಮಂತ್ರಿ ಮಂಡಳದ ಹೆಸರನ್ನು ಪ್ರಕಟಿಸಿದಾಗ ಕೃಷ್ಣಮಾಚಾರಿ ಅವರ ಹೆಸರು ಇಲ್ಲದಿರುವದು ಅನೇಕರಿಗೆ ಆಶ್ಚರ್ಯಕರವಾದರೂ ಮುಂದೆ ಕೆಲವೇ ತಿಂಗಳುಗಳಲ್ಲಿ ಖಾತಾರಹಿತವಾಗಿ ನೇಮಿಸಲ್ಪಟ್ಟರು. ಈ ಎಲ್ಲ ಪರಿಳತಕ್ಕೆ ಕಾರಣವೆಂದರೆ ಅವರ ಜಾತಕದ ನಾಲ್ಕೇ ಸ್ಥಾನಗಳಲ್ಲಿ ಎಲ್ಲ ಗ್ರಹಗಳೂ ಇದ್ದುದು.

೨) ಇವರ ಜಾತಕದಲ್ಲಿ ಶನಿಗಿಂತ ರವಿ, ಗುರು, ಮಂಗಳರು ಬಲಾಢ್ಯರಿರುವದರಿಂದಲೂ ಬಲಪಕ್ಷ, ಧೋರಣೆಗಳ ಕಾರಕ ಸ್ಥಾನಗಳಾದ ದ್ವಿತೀಯ, ಪಂಚಮ, ಷಷ್ಠ, ಸ್ಥಾನಗಳು ಪೂರಕವೂ ಪೋಷಕವೂ ಇರುವದರಿಂದಲೂ ಇವರು ಬಲಪಕ್ಷ ಧೋರಣೆಯುವರಿದ್ದಾರೆ, ಅಷ್ಟೇ ಅಲ್ಲ, ಬಂಡವಾಳಶಾಹೀಗಳ ಕೈವಾರಿಗಳೆಂದು ಹೆಸರು ಹೊಂದಿದ್ದಾರೆ.

೩) ಇವರದು ಕರ್ಕಲಗ್ನ, ಸಿಂಹರಾಶಿ ಇರುವದಲ್ಲದೇ ರವಿ, ಚಂದ್ರ, ಮಂಗಳ, ಗುರುಗಳು ಬಲಾಢ್ಯರಿರುವದರಿಂದ ಇವರಿಗೆ ಅಧಿಕಾರ ಪ್ರಾಪ್ತಿ ಬಹುದಿನಗಳವರೆಗೆ ಇದೆ.

೪) ಹಣಕಾಸಿನ ಸ್ಥಾನವಾದ ಪಂಚಮವೂ ಉದ್ಯಮ ಸ್ಥಾನವಾದ ಷಷ್ಠವೂ ಪೂರಕವಿರುವದರಿಂದ ಈ ಎರಡೇ ಸ್ಥಾನಗಳಲ್ಲಿ ಇವರು ಹೆಸರು ಪಡೆದಿದ್ದಾರೆ.

**ಮಾದರಿ ಕುಂಡಲಿ ೬:**
**ಯೋಜನಾ ಸಚಿವ ಶ್ರೀ ಸಿ. ಸುಬ್ರಹ್ಮಣ್ಯ ಅವರ ಜಾತಕ.**

ಯೋಜನಾ ಸಚಿವರಾದ ಚಿದಂಬರ ಸುಬ್ರಹ್ಮಣ್ಯ ಅವರು ೩೦-೧-೧೯೧೦ರಂದು ವೃಶ್ಚಿಕ ಲಗ್ನದ ಕನ್ಯಾರಾಶಿಯಲ್ಲಿ ಜನಿಸಿದ್ದು, ಇವರ ಜಾತಕದ ವಿವೇಚನೆ ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| ಶನಿ | ಮಂಗಳ | ರಾಹು | — |
| ಶುಕ್ರ | ಸಿ. ಸುಬ್ರಹ್ಮಣ್ಯ ಅವರ ಜಾತಕ | | — |
| ರವಿ ಬುಧ | | | — |
| — | ಲಗ್ನ ಕೇತು | — | ಗುರು ಚಂದ್ರ |

೧) ಇವರ ಜಾತಕದಲ್ಲಿ ರವಿ, ಗುರು, ಶನಿ ಯರಿಗಿಂತ ಬುಧ, ಶುಕ್ರ, ಚಂದ್ರರು ಬಲಾಢ್ಯರಿರುವದರಿಂದ ಅದರಲ್ಲಿಯೂ ರವಿಯು ಶತ್ರುಕ್ಷೇತ್ರ ಇರುವದರಿಂದ ಇವರು ನೇರ ಚುನಾವಣೆಗಿಂತ ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶ ಗಳಿಸುತ್ತಾರೆ

೨) ಚತುರ್ಥದಲ್ಲಿ ಶುಕ್ರನೇನೊ ಇದ್ದಾನೆ. ಆದರೆ ಚತುರ್ಥೇಶ ಹಾಗೂ ಗುರುವು ದುರ್ಬಲವಿರುವದರಿಂದಲೂ ಹಾಗೂ ಷಷ್ಠದಲ್ಲಿ ಮಂಗಳನಿರುವದರಿಂದಲೂ ಇವರಿಗೆ ಶತ್ರುಗಳು ಬಹಳ ಇದ್ದು ಪಕ್ಷದಲ್ಲಿ ಅಸಹಕಾರ ಯಾವಾಗಲೂ ಇರುತ್ತದೆ.

೩) ಬುಧ, ಶುಕ್ರ, ಚಂದ್ರರು ಬಲಾಢ್ಯರಿರುವದರಿಂದ ಯೋಜನಾ ಖಾತೆಯಲ್ಲಿಯೂ ಉದ್ದಿಮೆ ಕಾರಕ ಸ್ಥಾನವಾದ ಷಷ್ಠದಲ್ಲಿ ಉದ್ದಿಮೆ ಕಾರಕಗ್ರಹವಾದ ಮಂಗಳನು ಇರುವದರಿಂದ ಇವರು ದಕ್ಷ ಉದ್ದಿಮೆ

ಮಂತ್ರಿಗಳೆಂದೂ ಹಣಕಾಸಿನ ಸ್ಥಾನದ ಕಾರಕನಾಗಿಯೂ, ಪಂಚಮೇಶ ನಾದ ಗುರುವು ಭಾಗ್ಯೇಶನೊಂದಿಗೆ ಲಾಭದಲ್ಲಿರುವದರಿಂದಲೂ ಇವರು ದಕ್ಷ ಹಣಕಾಸಿನ ಮಂತ್ರಿಗಳೆಂದು ಇವರದೂ ಕನ್ಯಾರಾಶಿ ಇರುವದರಿಂದ ದಕ್ಷ ಆಹಾರ ಮಂತ್ರಿಗಳೆಂದೂ ಹೆಸರು ಹೊಂದಿದ್ದಾರೆ.

೪) ಬುಧ, ಶುಕ್ರ, ಚಂದ್ರರು, ಬಲಾಢ್ಯರಿರುವದರಿಂದ ಇದರ ಯೋಜನೆಗಳು (Plannings) ಚೆನ್ನಾಗಿರುತ್ತವೆ. ಆದರೆ, ರವಿ, ಶನಿ, ಗುರುಗಳು ನಿರ್ಬಲರಿರುವದರಿಂದ ಇವರೇ ಯೋಜನೆಗಳನ್ನು ಕಾರ್ಯ ರೂಪಕ್ಕಿಳಿಸಲು ಆಗುವದಿಲ್ಲ.

೫) ಬಲ ಪಕ್ಷ ಧೋರಣೆಗಳ ಕಾರಕ ಗ್ರಹವಾದ ಗುರುವು ಶತ್ರು ಕ್ಷೇತ್ರದಲ್ಲಿರುವುದರಿಂದಲೂ ರವಿಯೂ ಶತ್ರುಕ್ಷೇತ್ರದಲ್ಲಿರುವುದರಿಂದಲೂ ಇವರು ಬಲಪಕ್ಷ ಧೋರಣೆಗಳ ವಿರೋಧಿಗಳಾಗಿದ್ದಾರೆ. ಆದರೆ ಎಡ ಪಕ್ಷ ಧೋರಣೆಗಳ ಕಾರಕಗ್ರಹವೂ ವೃಶ್ಚಿಕ ಲಗ್ನದ ಯೋಗಕಾರಕ ಗ್ರಹವಾದ ಶನಿಯು ಕೇವಲ ಸ್ಥಾನಬಲದವನಿದ್ದು, ರಾಶಿ ಬಲದವನಿಲ್ಲದಿರುವ ಮೂಲಕ ಎಡ ಧೋರಣೆಗಳ ಕಡೆಗೆ ಇವರ ಒಲವು ಇದ್ದಾಗ್ಯೂ ಎಡ ಧೋರಣೆಗಳನ್ನು ಕಾರ್ಯರೂಪದಲ್ಲಿ ತರುವದರಲ್ಲಿ ತೊಂದರೆಯಾಗುತ್ತಿದೆ.

೬) ರವಿ, ಗುರು, ಶನಿ, ದಶಮೇಶ, ಚತುರ್ಥೇಶ, ದುರ್ಬಲರಿರುವ ಮೂಲಕ ಇವರಿಗೆ ಮುಖ್ಯ ಮಂತ್ರಿಯ ಸ್ಥಾನ ನಿಲುಕಲಿಲ್ಲ. ಆದರೆ ಲಗ್ನೇಶ ಬಲಾಢ್ಯನಿರುವದರಿಂದಲೂ ಚತುರ್ಥದಲ್ಲಿ ಶುಕ್ರನಿರುವದ ರಿಂದಲೂ, ಭಾಗ್ಯೇಶನು ಲಾಭದಲ್ಲಿರುವದರಿಂದಲೂ ಯೋಗಕಾರಕ ಗ್ರಹವಾದ ಶನಿಯು ಪಂಚಮದಲ್ಲಿರುವದರಿಂದಲೂ ಪ್ರಮುಖ ಖಾತೆಗಳ ಸ್ಥಾನವನ್ನು ಹಾಗೂ ಸಂಸ್ಥೆಯ ಅಧ್ಯಕ್ಷ ಪದವನ್ನೂ ಪಡೆಯಲು ಸಾಧ್ಯ ವಾಯಿತು.

**ಮಾದರಿ ಕುಂಡಲಿ ೬ : ಶ್ರೀ ಎಸ್. ಕೆ. ಪಾಟೀಲರ ಜಾತಕ.**

ಸದೋಬಾ ಕಾನ್ಹೋಜಿ ಪಾಟೀಲರು ೧೪-೮-೧೯೦೦ ನೇ ಇಸ್ವಿಯ ಬೆಳಗಿನ ೭-೪೦ ಕ್ಕೆ ರತ್ನಾಗಿರಿ ಜಿಲ್ಹೆಯ ಸಾವಂತವಾಡಿಯಲ್ಲಿ ಮಿಥುನ

ಲಗ್ನದ ಮೀನ ರಾಶಿಯಲ್ಲಿ ಜನಿಸಿದ್ದು, ಇವರ ಜಾತಕ ವಿವೇಚನೆ ಈ ಕೆಳಗಿನಂತಿದೆ.

| | | | |
|---|---|---|---|
| ಚಂದ್ರ | — | ಕೇತು | ಲಗ್ನ ಶುಕ್ರ ಮಂಗಳ |
| — | ಎಸ್. ಕೆ. ಪಾಟೀಲರ ಕುಂಡಲಿ | | ರವಿ ಬುಧ |
| — | | | — |
| ಶನಿ | ರಾಹು ಗುರು | — | — |

೧) ಶ್ರೀ ಪಾಟೀಲರ ಜಾತಕದಲ್ಲಿ ಶುಕ್ರ, ಚಂದ್ರರು ದ್ವಿತಿಯೇಶ, ಚತುರ್ಥೇಶ, ಪಂಚಮೇಶರು ಬಲಾಢ್ಯರಿದ್ದಾರೆ. ಆದುದರಿಂದ ಇವರದು ಸರಕಾರಕ್ಕಿಂತ ಪಕ್ಷದ ಮೇಲೆಯೇ ಹಿಡಿತ ಯಾವಾಗಲೂ ಇದೆ- ಎಂಬುವದಕ್ಕೆ ನಿರ್ದೇಶನವೆಂದರೆ ಮುಂಬೈ ಪ್ರದೇಶ ಕಾಂಗ್ರೇಸದ ಕಾರ್ಯ, ದರ್ಶಿ ಆಗಿದ್ದ ಅವರು ೧೯೪೬ ರಲ್ಲಿ ಅಧ್ಯಕ್ಷರಾಗಿದ್ದು, ಅಂದಿನಿಂದ ೧೯೫೭ ವರೆಗೆ ಕೇಂದ್ರ ಮಂತ್ರಿಗಳಾಗುವ ವರೆಗೂ :ಅಂದರೆ ಹನ್ನೊಂದು ವರ್ಷಗಳ ಸುದೀರ್ಘ ಕಾಲದವರೆಗೆ ಪ್ರಾಂತೀಯ ಕಾಂಗ್ರೆಸ ಅಧ್ಯಕ್ಷ ರಾಗಿದ್ದರು.

೨) ಇವರ ಜಾತಕವ ಯೋಕಾರಕ ಗ್ರಹಗಳು ಅಡಳಿತ ಪೋಷಕಕಾರಕ ಗ್ರಹಗಳು ಆದ ಲಗ್ನೇಶ ಭಾಗ್ಯೇಶ, ದಶಮೇಶ, (ಬುಧ, ಗುರು, ಶನಿಯು)ರು ನಿರ್ಬಲರಿರುವದರಿಂದ ಆಡಳತ ನಡೆಸು- ವದಾಗಲೀ ಅರ್ಥಾತ್ ಯಾವುದೊಂದು ರಾಜ್ಯದ ಮುಖ್ಯಮಂತ್ರಿ ಪದವಿಯಾಗಲಿ, ಕೇಂದ್ರ ಸರಕಾರದ ಮಹತ್ವದ ಖಾತೆಯ ಸಚಿವಸ್ಥಾನ ವನ್ನು ಪಡೆಯುವದಾಗಲೀ, ಇವರಿಂದ ಸಾಧ್ಯವಾಗಲಿಲ್ಲ. ಆದರೆ ಶುಕ್ರ, ಚಂದ್ರರು ಬಲಾಢ್ಯರಿರುವದರಿಂದ ಸ್ಥಾನಿಕ ಸಂಸ್ಥೆಗಳ ಕಾರ್ಯದಲ್ಲಿ ಸ್ಥಾನಿಕ ಸಮಸ್ಯೆಗಳನ್ನು ಬಗೆಹರಿಸುವದರಲ್ಲಿ ಇವರು ಸಿದ್ಧಹಸ್ತರು.

ಎಂಬುದಕ್ಕೆ ನಿದರ್ಶನವೆಂದರೆ, ಒಂದೇ ಸವನೆ ಮೂರು ಅಧಿಕಾರಾವಧಿಯ ವರೆಗೆ ಮುಂಬೈ ಕಾರ್ಪೋರೇಶನ್ನಿನ ಮೇಯರರಾಗಿದ್ದರು.

೩) ಇವರ ಜಾತಕದಲ್ಲಿ ಶನಿಯು ದುರ್ಬಲನಿರುವನಲ್ಲದೇ ಮಂಗಳನೊಂದಿಗೆ ಲಗ್ನ, ಸಪ್ತಮ ಸ್ಥಾನಗಳಲ್ಲಿ ಪ್ರತಿಯೋಗವಿರುವದರಿಂದ, ಇವರು ಎಡಪಕ್ಷ ಧೋರಣೆಗಳ ಬದ್ಧ ದ್ವೇಷಿಗಳಿದ್ದಾರೆ. ಹಾಗೂ ಈ ಶನಿ-ಮಂಗಳರ ಪ್ರತಿಯೋಗದಿಂದ ಹಿಂಬಾಲಕರಷ್ಟೇ ಶತ್ರುಗಳನ್ನೂ ನಿರ್ಮಾಣ ಮಾಡಿಕೊಂಡಿದ್ದಾರೆ.

೪) ಇವರ ಜಾತಕದಲ್ಲಿ ಶುಕ್ರ, ಚಂದ್ರರು ಬಲಾಢ್ಯರಿರುವದರಿಂದ ಶುಕ್ರ-ಚಂದ್ರರ ಗುಣಧರ್ಮಗಳಾದ ಖಾದ್ಯ, ಅನ್ನ, ಚಲಚಿತ್ರ, ಸಂಗೀತ, ನಾಟಕ ಮೊದಲಾದ ವಿಷಯಗಳಲ್ಲಿ ಇವರಿಗೆ ಆಸಕ್ತಿ, ಅಭಿರುಚಿ, ಇದ್ದುದಕ್ಕೆ ನಿದರ್ಶನಗಳೆಂದರೆ, ಇವರ ಮನೆಯಲ್ಲಿ ಯಾವಾಗಲೂ ಯಾವದೊಂದು ಅತಿಥಿಗಳ ಸಮಾರಂಭವಿರುವದಲ್ಲದೇ ಭರ್ಜರಿ ಮೇಜವಾನಿ ಇರುತ್ತದೆ. ಇದಲ್ಲದೇ ಈ ಹಿಂದೆ ಕೇಂದ್ರ ಚಲಚ್ಚಿತ್ರ ಪರಿಶೀಲನ ಮಂಡಳದ ಸದಸ್ಯರೂ, ಚಲಚ್ಚಿತ್ರ ನಿರ್ಮಾಪಕ ಸಂಸ್ಥೆಯ ಅಧ್ಯಕ್ಷರೂ ಚಲಚ್ಚಿತ್ರ ವಿಚಾರಣಾ ಸಮಿತಿಯ ಅಧ್ಯಕ್ಷರೂ ಆಗಿದ್ದರಲ್ಲದೇ ದಕ್ಷ ಆಹಾರ ಸಚಿವರೆಂದು ಹೆಸರುವಾಸಿಯಾಗಿದ್ದಾರೆ.

೫) ೧೯೬೨ರಿಂದ ಪ್ರಾರಂಭವಾವ ಸಾಡೇಸಾತಿಯು ೧೯೭೧ರವರೆಗಿನ ಕಾಲದಲ್ಲಿ ಇದ್ದುದರಿಂದ ಇವರ ರಾಜಕೀಯ ಜೀವನದ ಇಳಿಮುಖಕ್ಕೆ ಕಾರಣವಾಗಿದೆ.

**ಮಾದರಿ ೮ : ಪೂಜ್ಯ ಗುರೂಜಿ ಮಾಧವರಾವ ಎಸ್. ಗೋಳವಲಕರ ಇವರಜಾತಕ**

ರಾಷ್ಟ್ರೀಯ ಸ್ವಯಂಸೇವಕ ಸಂಘದ ಸಂಚಾಲಕರಾದ ಪೂಜ್ಯ ಮಾಧವರಾವ ಗೋಳವಲಕರ ಅವರು ೧೮|೧೯-೨-೧೯೦೬ನೇ ಇಸ್ವಿಯ

ಪ್ರಾತಃಕಾಲ ೪-೨೧ರ ಸಮಯದ ಧನು ಲಗ್ನದ ಧನು ರಾಶಿಯಲ್ಲಿ ಜನಿಸಿದ್ದು. ಇವರ ಜಾತಕದ ವಿಶ್ಲೇಷಣೆ ಈ ಕೆಳಗಿನಂತಿದೆ.

| | | | |
|---|---|---|---|
| ಮಂಗಳ | — | ಗುರು | — |
| ರವಿ, ಬುಧ ಶುಕ್ರ, ಶನಿ. | ಪೂಜ್ಯ ಗುರೂಜಿ ಮಾಧವರಾವ ಗೋಳವಲಕರ ಇವರ ಜಾತಕ | | ರಾಹು |
| ಕೇತು | | | — |
| ಲಗ್ನ ಚಂದ್ರ | — | — | — |

೧) ಇವರ ಜಾತಕದಲ್ಲಿ ಬೌದ್ಧಿಕ ರಾಶಿಯಾದ (ವಾಯುರಾಶಿ) ಕುಂಭರಾಶಿಯಲ್ಲಿ ರವಿ, ಶನಿ, ಶುಕ್ರ, ಬುಧ ಈ ಅನೇಕ ಗ್ರಹಗಳಿರುವದರಿಂದಲೇ ಇವರು ಪ್ರಾಧ್ಯಾಪಕರೂ, ಅಧ್ಯಾತ್ಮ ವಿಷಯದ ಪ್ರಕಾಂಡ ಪಾಂಡಿತ್ಯ ಪಡೆದಿದ್ದಾರಲ್ಲದೇ, ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸಂಚಾಲಕರಾಗಿ 'ಗುರೂಜಿ' ಎಂದು ಜನಪ್ರಿಯರಾಗಿದ್ದಾರೆ.

೨) ಇವರ ಜಾತಕದಲ್ಲಿ ಶನಿಯು ಬಲಾಢ್ಯನಿದ್ದು, ಅನೇಕ ಗ್ರಹಗಳು ವಾಯುರಾಶಿಯಲ್ಲಿರುವದರಿಂದ ಇವರು ಸನಾತನ, ಧಾರ್ಮಿಕ, ರಾಷ್ಟ್ರೀಯ ವಿಚಾರದ ಬುದ್ಧಿಜೀವಿಗಳಿಗೆ ಮಾರ್ಗದರ್ಶಕರಾಗಿದ್ದಾರೆ.

೩) ಇವರ ಜಾತಕದಲ್ಲಿ ರವಿಯು ನಿರ್ಬಲನಿರುವದರಿಂದಲೂ ಗುರುವು ಶತ್ರುಕ್ಷೇತ್ರದಲ್ಲಿರುವದರಿಂದಲೂ ಇವರು ಪ್ರತ್ಯಕ್ಷ ರಾಜಕೀಯದಲ್ಲಿ (ಚುನಾವಣೆ ಮೊದಲಾದ) ಭಾಗವಹಿಸದಾದರು.

**ಮಾದರಿ ಕುಂಡಲೀ : ಶ್ರೀ ಜಗನ್ನಾಥರಾವ ಜೋಶಿಯವರ ಜಾತಕ.**

ಭಾರತೀಯ ಜನಸಂಘ ಪಕ್ಷದ ಅಖಿಲ ಭಾರತ ಮಟ್ಟದ ರಾಜಕಾರಣಿಗಳಾದ ಶ್ರೀಮಾನ್ ಜಗನ್ನಾಥರಾವ ಜೋಶಿ ಯವರು ದಿನಾಂಕ

೨೪-೬-೧೯೨೦ ನೇ ಇಸ್ವಿ ಸೂರ್ಯೋದಯದ ನಂತರ ಐದು ಘಟಕ ಮೂರು ಫಳ ಸಮಯದ ಮಿಥುನ ಲಗ್ನ ಕನ್ಯಾರಾಶಿಯಲ್ಲಿ ಜನಿಸಿದರೆಂದು ತಿಳಿದು ಬಂದಿವೆ. ಕರ್ಕಲಗ್ನವೂ ಇರುತ್ತದೆಂದು ಕೆಲವರ ಅಭಿಪ್ರಾಯವಿದ್ದು, ಇವರ ಜಾತಕವ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| — | ಕೇತು | — | ಲಗ್ನ, ರವಿ, ಶುಕ್ರ, ಬುಧ |
| — | ಶ್ರೀ ಜಗನ್ನಾಥರಾವ ಜೋಶಿ ಇವರ ಜಾತತಕ | | ಗುರು |
| — | | | ಶನಿ |
| — | — | ಮಂಗಳ ರಾಹು | ಚಂದ್ರ |

೧) ಶ್ರೀ ಜಗನ್ನಾಥರಾವ ಜೋಶಿಯವರ ಜಾತಕದ ಲಗ್ನದಲ್ಲಿ ಬುಧ, ಶುಕ್ರ, ರವಿಯರು ದ್ವಿತೀಯದಲ್ಲಿ ಯೋಗಕಾರಕ ಗ್ರಹವಾದ ಗುರುವು ಉಚ್ಚ ರಾಶಿಯವನಾಗಿ ವಿರಾಜಿತನಾಗಿರುವದರಿಂದ ಇವರು ಭವ್ಯ ವ್ಯಕ್ತಿತ್ವವನ್ನು ಅಸ್ಖಲಿತ ಪಾಂಡಿತ್ಯ ಪೂರ್ಣ ಮಾತುಗಾರಿಕೆಯ ಪ್ರಭಾವದಿಂದ ಜನಸಾಮಾನ್ಯರ ವಿಶ್ವಾಸ ಗಳಿಸಿದ್ದಾರಲ್ಲದೇ ಅಸಂಖ್ಯ ಹಿಂಬಾಲಕರನ್ನು ಹೊಂದಿದ್ದಾರೆ.

೨) ಇವರ ಜಾತಕದಲ್ಲಿ ಬಲಪಕ್ಷ ಧೋರಣೆಯ ಕಾರಕ ಗ್ರಹವಾದ ಗುರುವು ಉಚ್ಚರಾಶಿಯವನಾಗಿಯೂ ಯೋಗಕಾರಕನಾಗಿಯೂ ದ್ವಿತೀಯದಲ್ಲಿ ವಿರಾಜಿತನಾಗಿದ್ದಾನೆ. ಎಡಪಕ್ಷ ಧೋರಣೆಯ ಕಾರಕಗ್ರಹವಾದ ಶನಿಯು ಶತ್ರು ಕ್ಷೇತ್ರದಲ್ಲಿದ್ದು ನಿರ್ಬಲನಿದ್ದಾನೆ. ಆದುದರಿಂದ ಇವರು ಕೇವಲ ಬಲಪಕ್ಷ ಧೋರಣೆಯ ವಿಚಾರದವರಿದ್ದಾರಷ್ಟೇ ಅಲ್ಲ, ಎಡಪಕ್ಷ ಧೋರಣೆಗಳನ್ನೂ ಅದರಲ್ಲಿಯೂ ಕಮ್ಯುನಿಷ್ಟ ಮೊದಲಾದ ಪಕ್ಷಗಳ ಬದ್ಧ ದ್ವೇಷೀಗಳಿದ್ದಾರೆ.

೩) ಇವರ ಜಾತಕದಲ್ಲಿ ಬುಧ, ಶುಕ್ರ, ಗುರುಗಳು ಬಲಾಢ್ಯರಿರುವರಲ್ಲದೇ ಚಂದ್ರನು ಚತುರ್ಥದಲ್ಲಿರುವದರಿಂದ ಇವರು ಪಕ್ಷದ ಸದಸ್ಯರಲ್ಲಿ ಮೆಚ್ಚಿಗೆ ಪಡೆದಿರುವರಲ್ಲದೇ ಕೇಂದ್ರೀಯ ಕಾರ್ಯಕಾರೀ ಮಂಡಳದ ಸದಸ್ಯರೂ ಕಾರ್ಯದರ್ಶಿಗಳೂ ಆಗಿದ್ದಾರೆ. ಇಷ್ಟೇ ಅಲ್ಲ, ಇವರ ಜಾತಕದ ಪ್ರಕಾರ ಶೀಘ್ರದಲ್ಲಿಯೇ ಅಖಿಲಭಾರತ ಮಟ್ಟದ ಪಕ್ಷದ ಅಧ್ಯಕ್ಷಸ್ಥಾನವನ್ನು ಪಡೆದರೆ ಆಶ್ಚರ್ಯವಾಗದು.

೪) ಇವರ ಜಾತಕದಲ್ಲಿ ಶನಿ ದೃಷ್ಟಿತ ಮಂಗಳನಿರುವದರಿಂದ ಹಾಗೂ ನಿರ್ಬಲ ಭಾಗ್ಯೇಶನಿರುವದರಿಂದ ಚುನಾವಣೆಯಲ್ಲಿ ಯಶ ಗಳಿಸಲು ಹೋರಾಡ ಬೇಕಾಗುತ್ತದೆ. ಅರ್ಥಾತ್ ಸುಲಭ ಯಶ ದೊರೆಯದು.

೫) ಮಿಥುನ ಲಗ್ನದ ಯೋಗಕಾರಕ ಗ್ರಹಗಳಾದ ಬುಧ, ಶುಕ್ರ, ಗುರು, ಚಂದ್ರರು ಅಂದರೆ ದಶಮೇಶ, ಲಗ್ನೇಶ, ದ್ವಿತಿಯೇಶ, ಚತುರ್ಥೇಶ, ಪಂಚಮೇಶರು ಬಲಾಢ್ಯರಿರುವದರಿಂದಲೇ ಇವರು ರಾಷ್ಟ್ರಮಟ್ಟದ ಧುರೀಣರಾಗಿದ್ದಾರಷ್ಟೇ ಅಲ್ಲ, ಭವಿಷ್ಯದಲ್ಲಿ ಕೇಂದ್ರ ಕ್ಯಾಬಿನೆಟ್ ಮಟ್ಟದ ಸಚಿವರಾದರೆ ಸೋಜಿಗದ ಸಂಗತಿಯಾಗದು.

೬) ಇವರ ಜಾತಕದಲ್ಲಿ ಅನೇಕ ಗ್ರಹಗಳು ಅನುದಿತ ಗೋಲಾರ್ಧದಲ್ಲಿ ಇರುವದರಿಂದಲೇ ಇವರು ಪ್ರತ್ಯಕ್ಷ ರಾಜಕಾರಣಗಳಲ್ಲಿ ಭಾಗವಹಿಸುವದಾಗಲೀ ಚುನಾವಣೆ ಮೊದಲಾದ ಸ್ಪರ್ಧೆಗಳಲ್ಲಿ ಯಶ ಪಡೆದು ಸ್ಥಾನ-ಮಾನ ಗಳಿಸುವದರಲ್ಲಿ ದೀರ್ಘಕಾಲ ಕಾಯಬೇಕಾಯಿತು. ಇದು ಜೀವನದ ಉತ್ತರಾರ್ಧದಲ್ಲಿ ಸ್ಥಾನಮಾನ ಪಡೆಯುವ ಜಾತಕವಿರುತ್ತದೆ.

## ಮಾದರಿ ಕುಂಡಲಿ ೧೦: ಮೈಸೂರಿನ ಮಾಜಿ ಮುಖ್ಯ ಮಂತ್ರಿಗಳಾದ ಬಸಪ್ಪ ದಾನಪ್ಪ ಜತ್ತಿ ಇವರ ಜಾತಕ.

ಮೈಸೂರಿನ ಮಾಜಿ ಮುಖ್ಯ ಮಂತ್ರಿಗಳಾದ ಶ್ರೀಮಾನ ಬಸಪ್ಪ ದಾನಪ್ಪ ಜತ್ತಿಯವರು ದಿನಾಂಕ ೧೦-೯-೧೯೧೧ ನೇ ಇಸ್ವಿಯ ರಾತ್ರಿ

೯-೧೮ ಘಂಟೆಯು ಸಮಯದ ಮೇಷ ಲಗ್ನದ ಮೀನ ರಾಶಿಯಲ್ಲಿ ಜನಿಸಿದ್ದಾರೆಂದು ತಿಳಿದು ಬಂದಿದೆ. ಇವರ ಜಾತಕದ ವಿಶ್ಲೇಷಣೆ ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| ಚಂದ್ರ | ಶನಿ ಲಗ್ನ ರಾಹು | ಮಂಗಳ | — |
| — | ಶ್ರೀ ಬಸಪ್ಪ ದಾನಪ್ಪ ಜತ್ತಿಯವರ ಜಾತಕ | | — |
| — | | | ರವಿ, ಬುಧ, ಶುಕ್ರ |
| - | — | ಗುರು ಕೇತು | — |

೧) ಇವರ ಜಾತಕದ ಮೇಷ ಲಗ್ನದ ಯೋಗಕಾರಕನು ರಾಜಕೀಯ ಚುನಾವಣೆಯ ಪೋಷಕನು. ರಾಜಪಾಲ, ಮುಖ್ಯಮಂತ್ರಿ, ಕ್ಯಾಬಿನೆಟ್ ಮಂತ್ರಿ, ಮೊದಲಾದ ಅಧಿಕಾರೀ ಸ್ಥಾನ ಪಡೆಯುವ ಪೋಷಕ ಗ್ರಹವೂ ಆದ ರವಿಯು ಬಲಾಢ್ಯ ಇದ್ದುದರಿಂದಲೇ ಇವರು ಅಧಿಕಾರ ಸ್ಥಾನ, ಮಾನಾದಿಗಳನ್ನು ಪಡೆದಿದ್ದಾರೆ.

೨) ಇವರ ಜಾತಕದಲ್ಲಿ ಶನಿಯು ನೀಚನಿರುವದರಿಂದಲೂ, ಶತ್ರುಕ್ಷೇತ್ರದಲ್ಲಿರುವದರಿಂದಲೂ, ಇವರು ಎಡಪಕ್ಷ ಧೋರಣೆಗಳ ವಿರೋಧಿಗಳು. ಇದರಂತೆ ಗುರುವೂ ಕೂಡ ಯೋಗಕಾರಕನಿದ್ದಾಗ್ಯೂ ಶತ್ರುಕ್ಷೇತ್ರದಲ್ಲಿರುವದರಿಂದ ಬಲಪಕ್ಷ ಧೋರಣೆಗಳ ಪೂರಕರೂ ಇರದೇ ಮಧ್ಯಮ ಧೋರಣೆಗಳುಳ್ಳವರು.

೩) ಚತುರ್ಥೇಶ, ಶುಕ್ರ, ಚಂದ್ರರು ನಿರ್ಬಲರಿರುವದರಿಂದ ಪಕ್ಷದಲ್ಲಿ ಅಷ್ಟೊಂದು ವರ್ಚಸ್ಸು ಇವರದು ಇರಲಾರದು, ಅಥವಾ ಪಕ್ಷದ ಕಾರ್ಯಕಾರೀ ಕಮೀಟಿಯ ಸದಸ್ಯರಲ್ಲಿ ಇವರಿಗೆ ವಿರೋಧಿಗಳು ಬಹಳ.

೪) ೨೫-೨-೧೯೬೨ರಿಂದ ೨೮-೪-೧೯೭೧ರವರೆಗೆ ಇವರಿಗೆ ಸಾಡೇಸಾತಿ ಇದ್ದುದರಿಂದ ಪ್ರತ್ಯಕ್ಷ ರಾಜಕಾರಣದಿಂದ ದೂರ ಸರಿಯಬೇಕಾಯಿತು, ಆದರೆ ಈಗ ಮಾತ್ರ ಅನುಕೂಲಕಾಲವಿರುವದರಿಂದ ಪ್ರತ್ಯಕ್ಷ ರಾಜಕಾರಣದಲ್ಲಿ ಭಾಗವಹಿಸಿ, ಸ್ಥಾನ, ಹುದ್ದೆಗಳನ್ನು ಪಡೆಯುವರು.

## ಮಾದರಿ ಕುಂಡಲಿ ೧೧: ಮೈಸೂರಿನ ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ವೀರೇಂದ್ರ ಪಾಟೀಲರ ಜಾತಕ

ಮೈಸೂರಿನ ಮಾಜಿ ಮುಖ್ಯ ಮಂತ್ರಿಗಳಾದ ಶ್ರೀಮಾನ್ ವೀರೇಂದ್ರ ಪಾಟೀಲರು ದಿನಾಂಕ ೨೭-೨-೧೯೨೩ನೇ ಇಸ್ವಿಯ ರಾತ್ರಿ ೧-೩೦ಕ್ಕೆ ವೃಶ್ಚಿಕ ಲಗ್ನದ ಮಿಥುನ ರಾಶಿಯಲ್ಲಿ ಜನಿಸಿದ್ದಾರೆಂದು ತಿಳಿದು ಬಂದಿದೆ. ಇವರ ಜಾತಕದ ವಿಶ್ಲೇಷಣೆ ಈ ಕೆಳಗಿನಂತಿದೆ.

| | | | |
|---|---|---|---|
| — | ಮಂಗಳ | — | ಚಂದ್ರ |
| ರವಿ, ಕೇತು | ಶ್ರೀ ವೀರೇಂದ್ರ ಪಾಟೀಲ ಅವರ ಜಾತಕ | | — |
| ಬುಧ | | | ರಾಹು |
| ಶುಕ್ರ | ಲಗ್ನ | ಗುರು | ಶನಿ |

೧) ಇವರ ಜಾತಕದಲ್ಲಿ ಗುರುವಿನಿಗಿಂತ ಶನಿಯೇ ಬಲಾಢ್ಯನಿರುವದರಿಂದ ಇವರು ಎಡ ಪಕ್ಷ ಧೋರಣೆಗಳ ವಿಚಾರದವರಿರುತ್ತಾರೆ.

೨) ಲಗ್ನೇಶ, ಚತುರ್ಥೇಶರು ಬಲಾಢ್ಯರಿರುವದರಿಂದಲೇ ಇವರಿಗೆ ಅಧಿಕಾರ ಪ್ರಾಪ್ತಿಯಾಗಿರುವದಲ್ಲದೇ ಪಕ್ಷದಲ್ಲಿಯೂ ಸಹಕಾರ, ಸಹಾನುಭೂತಿ ಬಹಳವಿದೆ.

೩) ದಶಮೇಶನಾದ ರವಿಯು ಶತ್ರು ಕ್ಷೇತ್ರದಲ್ಲಿ ಕೇತುವಿನೊಂದಿಗೆ ಚತುರ್ಥದಲ್ಲಿಯೂ ಪಂಚಮೇಶನಾದ ಗುರುವು ಶತ್ರುಕ್ಷೇತ್ರಿಯಾಗಿ ವ್ಯಯ

ಸ್ಥಾನದಲ್ಲಿಯೂ, ದ್ವಿತೀಯ ಸ್ಥಾನದಲ್ಲಿ ಶತ್ರುಕ್ಷೇತ್ರದ ಶುಕ್ರನು ಇದ್ದಾನೆ. ಆದುದರಿಂದ ಇವರು ಹುಟ್ಟು ಧುರೀಣರಾಗಿಲ್ಲ. ಹಾಗೂ ಮನೆತನದ ಸೊತ್ತಾಗಿ ಧುರೀಣತ್ವ ಇವರಿಗೆ ಲಭಿಸಿಲ್ಲ. ಏಣಿಯು ಕೆಳಗಿನ ಮಟ್ಟದಿಂದ ಮೇಲೇರಿ ಅಧಿಕಾರ ಹೊಂದಿದ ಸ್ವಯಂ ರೂಪಿತ ಧುರೀಣರಾಗಿದ್ದಾರೆ. ಇವಲ್ಲದೇ ಲಗ್ನೇಶನಾದ ಮಂಗಳನು ಬಲಾಢ್ಯನಾಗಿ ಷಷ್ಟದಲ್ಲಿರುವದರಿಂದ ಎಂಥ ಪ್ರಬಲ ಶತ್ರುಗಳನ್ನು ಎದುರಿಸಿ ಜಯಶೀಲರಾಗುವರು.

೪) ೧೯೭೧ರ ಗೋಚರಿಯ ಶನಿಯ ಪರಿಭ್ರಮಣವು ಮಂಗಳನ ಮೇಲಿನಿಂದ ಅರ್ಥಾತ್ ಸಾಡೇಸಾತಿಯ ಪ್ರಾರಂಭವಾಗಿದ್ದರಿಂದಲೂ ಇವರು ಅಧಿಕಾರ ತ್ಯಾಗ ಮಾಡಬೇಕಾಯಿತು.

## ಮಾದರಿ ಕುಂಡಲಿ ೧೨: ಶೇಕ ಮುಜಿಬರ ರಹಮಾನರ ಜಾತಕ

ಎಲ್ಲಿ ಹೋದರು ಒಂದೇ ಪ್ರಶ್ನೆ ಸ್ವತಂತ್ರ ಬಂಗ್ಲಾ ದೇಶ ಅಸ್ತಿತ್ವದಲ್ಲಿ ಬರುವದೇ ? ಮುಜಬರ ರಹಮಾನರು ಜೀವಂತರಿರುವರೇ ? ಈ ಪ್ರಶ್ನೆಗಳಿಗೆ ಉತ್ತರ ಕೊಡುವದು ಕಠಿಣವಾದರೂ ಜೋತಿಷಿಗಳು ಉತ್ತರ ಕೊಡಲೇ ಬೇಕಾಗುತ್ತದೆ. ಆದರೆ ಪ್ರಸ್ತುತ ಈ ವಿಭಾಗದಲ್ಲಿ ಈ ವಿಷಯದ ಬಗೆಗೆ ವಿಶ್ಲೇಷಿಸದೆ ಇಡೀ ಪ್ರಪಂಚಕ್ಕೆ ಕುತುಹಲಕರವಾದ ಎಲ್ಲೆಡೆಯಲ್ಲಿಯೂ ಚರ್ಚೆಗೆ ಆಸ್ಪದ ಮಾಡಿಕೊಟ್ಟು ಅನೇಕ ದೇಶದ ಗಮನವನ್ನು ತನ್ನ ಕಡೆಗೆ ಸೆಳೆದ ಬಂಗ್ಲಾ ದೇಶದ ಪ್ರಮುಖರೂ (ಪೂರ್ವಪಾಕಿಸ್ತಾನ) ಅವಾಮಿ ಲೀಗದ ಧುರೀಣರೂ, ಆದ ಶೇಖ ಮುಜಿಬರ ರಹಮಾನರ ಜಾತಕ ಎಂತಿರಬೇಕು? ಗ್ರಹ ಬಲ ಹೇಗಿರ ಬೇಕು? ಎಂಬುವದು ಪರೀಶೀಲಿಸುವದು ಅಪ್ರಸ್ತುತವಾಗಲಾರದೆಂದು ಭಾವಿಸಿ, ಚುನಾವಣೆಯ ದೃಷ್ಟಿಯಿಂದ ಅವರ ಜಾತಕದ ವಿಶ್ಲೇಷಣೆಯನ್ನು ಮಾಡಲಾಗಿದೆ. ಶೇಖ ಮುಜಿಬರ ರಹಮಾನರು ೧೭–೩–೧೯೨೦ನೇ ಇಸ್ವಿಯ ಮೀನ ಲಗ್ನದ, ಮಕರ ರಾಶಿಯ ಶ್ರವಣಾ ನಕ್ಷತ್ರದ ಚತುರ್ಥ ಚರಣದಲ್ಲಿ ಜನಿಸಿದ್ದಾರೆಂದು ತಿಳಿದುಬಂದಿದೆ. ಅವರ ಜಾತಕ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಮಾಡಲಾಗಿದೆ.

| | | | |
|---|---|---|---|
| ಲಗ್ನ ರವಿ. ಬುಧ | ಕೇತು | — | — |
| ಶುಕ್ರ | ಶೇಖ ಮುಜಿಬರ ರೆಹಮಾನರ ಜಾತಕ | | ಗುರು |
| ಚಂದ್ರ | | | ಶನಿ |
| — | — | ಮಂಗಳ ರಾಹು | — |

೧) ಮೀನ ಲಗ್ನದ ಯೋಗಕಾರಕ ಗ್ರಹಗಳಾದ ಗುರು, ಬುಧ ಚಂದ್ರರು, ಲಗ್ನೇಶ, ದಶಮೇಶ, ಚತುರ್ಥೇಶ, ಸಪ್ತಮೇಶ ಪಂಚಮೇಶರಾಗಿ ಬಲಾಢ್ಯರಿರುವದರಿಂದಲೇ ಅವರು ಬಂಗ್ಲಾದೇಶದ ಪ್ರಮುಖರು ಅವಾಮಿ ಲೀಗದ ಧುರೀಣರಾಗಿದ್ದು, ಮಹಾತ್ಮಾಗಾಂಧೀ, ಮಾರ್ಟಿನ್ ಲುಥರ ಕಿಂಗ ರಂತೆ ಪ್ರಸಿದ್ಧಿಯನ್ನೂ ಜನಪ್ರಿಯತೆಯನ್ನೂ ಗಳಿಸಿ ಕೊಂಡಿದ್ದಾರೆ.

೨) ಭಾಗ್ಯೇಶನಾದ ಮಂಗಳನು (ಶನಿದೃಷ್ಟಿತ) ಅಷ್ಟಮದಲ್ಲಿರುವದ ರಿಂದಲೂ ಚತುರ್ಥೇಶನಾದ ಬುಧನು ಶತ್ರುಕ್ಷೇತದಲ್ಲಿರುದದರಿಂದಲೂ ಚು-ನಾ-ವಣೆಯಲ್ಲಿ ಪ್ರಚಂಡ ಜಯ ಗಳಿಸಿದಾಗಿಯೂ, ಪ್ರಚಂಡ ಬೆಂಬಲದಿಂದ ಆರಿಸಿ ಬಂದರೂ ಪ್ರಧಾನಿ ಪದದ ಅಧಿಕಾರ ಪಡೆಯಲು ತೊಡಕು ಬಂದಿವೆ. ಆದರೂ ಲಗ್ನೇಶ, ದಶಮೇಶ, ಪಂಚಮೇಶ, ಗುರು, ಚಂದ್ರರು ಬಲಾಢ್ಯ ರಿರುವದರಿಂದ ವಿಘ್ನ, ಅಡು-ಅಡಚಣೆಗಳಿದ್ದಾಗ್ಯೂ ಅಧಿಕಾರ ಪಡೆಯಲು ವಿಲಂಬವಾದರು ಗೌರವಾನ್ವಿತ ಅಧಿಕಾರ ಪಡದೇ ತೀರುತ್ತಾರೆ.

೩) ಶೇಖ ಮುಜಿಬರ ರಹಮಾನರ ಜಾತಕದಲ್ಲಿ ಷಷ್ಠದಲ್ಲಿ ನೀಚ ರಾಶಿಯ ಶನಿಯು ಭಾಗ್ಯೇಶನಾದ ಅಷ್ಟಮದಲ್ಲಿರುವ ಮಂಗಳನನ್ನು ನೋಡುತ್ತಾನೆ. ಇವಲ್ಲದೇ ೧೧-೪-೧೯೬೨ರಿಂದ ನೀಚ ರಾಶಿಯ ಶನಿಯ ಮಹರ್ದಶೆ ಪ್ರಾರಂಭವಾಗಿದ್ದರಿಂದ ಈ ಎಲ್ಲ ಅನಾಹುತಗಳಾಗಿವೆ. ಅವ ರಲ್ಲಿಯೂ ೧೧-೪-೬೨ ರಿಂದ ೧೪-೪-೧೯೬೫ರ ವರೆಗಿನ ಶನಿ ಮಹ-ರ್ದಶೆಯಲ್ಲಿ ಶನಿ ಅಂತರದಶೆ ಇದ್ದ ಈ ಕಾಲದಲ್ಲಿ ದೇಶ ದ್ರೋಹಿ

ಎಂಬ ಗಂಭೀರ ಆರೋಪ ಸಾರಿ, ಜೇಲಿಗೆ ಕಳುಹಿಸಿತು. ಆದರೆ ೧೫-೪-೧೯೬೫ರಿಂದ ಶನಿದಶೆಯಲ್ಲಿ ಬುಧ ಅಂತರದಶೆ ಪ್ರಾರಂಭವಾದಾಗ, ಯೋಗಕಾರಕನು ಗುರುವಿನೊಂದಿಗೆ ಲಗ್ನದಲ್ಲಿರುವ ಈ ಬುಧನ ಅಂತರದಶೆಯಲ್ಲಿ ಕರಾರಹಿತವಾಗಿ ದೇಶದ್ರೋಹಿ ಎಂಬ ಕೇಸನ್ನು ಹಿಂದೆ ತೆಗೆದು ಜೇಲಿನಿಂದ ಬಿಡುಗಡೆ ಯಾದರು. ಆದರೆ ೨೩-೧೨-೬೭ರಿಂದ ೨-೨-೬೯ರೊಳಗಿನ ಕೇತು ಅಂತರದಶೆ ನಡೆದಾಗ ಕ್ಷುಲ್ಲಕ ಕಾರಣದಿಂದ ಶೇಖರನ್ನು ಮತ್ತೆ ಜೇಲಿಗೆ ಕಳುಹಿಸಿದರು. ೧೯೭೦ರಲ್ಲಿ ಗೋಚರಿಯ ಚತುರ್ಥ ಶನಿಯು ಕಾರಣದಿಂದಲೂ ಮೂಲ ಶನಿಯು ಪ್ರತಿಯೋಗ, ಮಂಗಳನೊಂದಿಗೆ ಇರುವದರಿಂದಲೂ, ಮತ್ತೆ ಅದೇ ಗಂಭೀರ ಆರೋಪವಾದ ದೇಶ ದ್ರೋಹಿ ಎಂಬ ಕಾರಣದಿಂದ ಕೈದು ಮಾಡಲಾಗಿದೆ. ಆದರೆ ೧೩ ೨-೧೯೭೧ರಿಂದ ಪ್ರಾರಂಭವಾದ ಶನಿ ಮಹಾದಶೆಯಲ್ಲಿಯ ಶುಕ್ರ ಅಂತರದಶೆ ಇರುವದರಿಂದಲೂ ಈಗ ಗೋಚರಿಯಿಂದ ೧೧ನೇ ಗುರು ಇರುವದರಿಂದಲೂ ೨೮-೪-೧೯೭೧ರಿಂದ ಶನಿಯು ಗೋಚರಿ ಪರಿಭ್ರಮಣ ವೃಷಭ ರಾಶಿಯಲ್ಲಿ ನಡೆದಿರುವದರಿಂದಲೂ ೧೫-೯-೧೯೭೧ರಿಂದ ೧೫-೧೨-೭೧ರ ಒಳಗೆ ಶೇಖರು ಸ್ವತಂತ್ರ ಬಂಗ್ಲಾ ಗಣರಾಜ್ಯದ ಅಧ್ಯಕ್ಷರಾಗಿ ಚುನಾಯಿತರಾಗುವ ಸಂಭವ ವಿದೆ. **ಆದರೆ ೧೫-೮-೭೧ರಿಂದ ೧೫-೯-೭೧ರ ವರೆಗಿನ ಕಾಲದಲ್ಲಿ ಇವರ ಜೀವಕ್ಕೆ ಗಂಡಾಂತರವಿದೆ.**

೫) ಕೊನೆಯದಾಗಿ ಶನಿ ದೃಷ್ಟಿ ಮಂಗಳ ಅಷ್ಟಮದಲ್ಲಿ ಇರುವದು ಇವರ ಜೀವಕ್ಕೆ ಗಂಡಾಂತರಕಾರಿ ಆಗುದರಿಂದ ಇವರ ಸಾವು ಸಾಮಾನ್ಯ ರೀತಿಯಿಂದ ನಡೆಯದೇ ಕೊಲೆ ಮೊದಲಾದ ದುರ್ಮರಣ ರೀತಿಯಲ್ಲಿ ಆಗುವದೆಂದ ತಿಳಿಸಲು ವಿಷಾದವಾಗುತ್ತದೆ.

**ವಿಶೇಷ ಸೂಚನೆ:** ಈ ಗ್ರಂಥದಲ್ಲಿ ಚುನಾವಣೆಗೆ ಸಂಬಂಧಿಸಿದ ರಾಜಕೀಯ ವ್ಯಕ್ತಿಗಳ ಜಾತಕಗಳನ್ನು ಮಾದರೀಯನ್ನಾಗಿ ವಿವೇಚಿಸಿದ್ದು, ಶೀಘ್ರದಲ್ಲಿಯೇ ನಾವು ಪ್ರಕಟಿಸಲಿರುವ **"ಕುಂಡಲಿ ಸಂಗ್ರಹ"** ಎಂಬ ಗ್ರಂಥದಲ್ಲಿ, ಸಾಹಿತಿಗಳ, ಕಲಾಕಾರಕ, ಪ್ರಮುಖ ವ್ಯಕ್ತಿಗಳ, ಜಾತಕಗಳ ವಿಶ್ಲೇಷಣೆ ಮಾಡಲಾಗುವುದು.

**ಪಕ್ಷ-ಸಂಸ್ಥೆಗಳ ಜಾತಕಗಳ ವಿಶ್ಲೇಷಣೆ :** ವ್ಯಕ್ತಿಯ ಜೀವನದಲ್ಲಿ ಏರು ಪೇರುಗಳಿರುವಂತೆ ರಾಷ್ಟ್ರಗಳ, ವಿವಿಧ ರಾಜಕೀಯ ಪಕ್ಷಗಳ, ಸಂಘ ಸಂಸ್ಥೆಗಳ ಜೀವನದಲ್ಲಿಯೂ ಏರು ಪೇರುಗಳಿರುತ್ತವೆ. ಅಭ್ಯರ್ಥಿಯ ಜಯಾಪಜಯ ಪಕ್ಷ, ಸಂಘ, ಸಂಸ್ಥೆಗಳ ಬಲಾಬಲದ ಪ್ರಭಾವಗಳ ಮೇಲೆ ಆಧಾರ ಪಟ್ಟಿರುತ್ತದೆ. ಅಭ್ಯರ್ಥಿಯ ಚುನಾವಣಾ ಪರಿಣಾಮದ ಭವಿಷ್ಯ ನುಡಿಯ ಬೇಕಾದರೆ ಅಭ್ಯರ್ಥಿಯ ಜಾತಕ ಹಾಗೂ ಪಕ್ಷ-ಸಂಸ್ಥೆಗಳ ಜಾತಕಗಳ ತುಲನಾತ್ಮಕ ವಿಶ್ಲೇಷಣೆ ಮಾಡುವದು ಅವಶ್ಯವಿದೆ, ಈ ಪ್ರಕರಣದ ಇದೇ ವಿಭಾಗದಲ್ಲಿ ವಿಭಿನ್ನ ರಾಜಕೀಯ ಪಕ್ಷಗಳ, ಸಂಘ, ಸಂಸ್ಥೆಗಳ ಜಾತಕಗಳನ್ನು ವಿಶ್ಲೇಷಿಸಲಾಗಿದೆ.

**ಮಾದರಿ ೧ :** ರಾಷ್ಟ್ರೀಯ ರಾಜಕೀಯ ಪಕ್ಷಗಳಲ್ಲೊಂದಾದ **ಕಾಂಗ್ರೆಸ ಪಕ್ಷದ** ಜಾತಕವನ್ನು ಪರಿಶೀಲಿಸುವಾ.

ಕಾಂಗ್ರೇಸ ಪಕ್ಷವು ೨೮-೧೨-೧೮೮೫ರ ಮಧ್ಯಾಹ್ನ ೧-೦೦ ಘಂಟೆಗೆ ಮೀನ ಲಗ್ನದ, ಕನ್ಯಾ ರಾಶಿಯಲ್ಲಿ ಜನಿಸಿದೆ. ಈ ಜಾತಕದ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| ಲಗ್ನ | — | — | ಶನಿ |
| ಕೇತು | ಕಾಂಗ್ರೇಸ ಪಕ್ಷದ ಜಾತಕ | | — |
| ಶುಕ್ರ | | | ಮಂಗಳ ರಾಹು |
| ರವಿ | ಬುಧ | — | ಗುರು ಚಂದ್ರ |

೧) ಜಾತಕದಲ್ಲಿ ಗುರುವು ಬಲಾಢ್ಯನಿದ್ದರೆ, ಬಲ ಪಕ್ಷಗಳ ಧೋರಣೆಗಳ ಪೂರಕವೂ, ಶನಿಯು ಬಲಾಢ್ಯನಿದ್ದರೆ, ಎಡ ಪಕ್ಷಗಳ ಧೋರಣೆಗಳ ಪೂರಕವೂ ಹೀಗೆ ಎಡ-ಬಲ ಮಧ್ಯಮ ಧೊರಣೆಗಳ ಪೂರಕ, ಪೋಷಕ,

ಕಾರಕ, ಲಗ್ನ, ರಾಶಿ, ಸ್ಥಾನಗಳಾವವು ಎಂಬುದನ್ನು ಇದೇ ಗ್ರಂಥದ ಮೂರನೆಯ ಪ್ರಕರಣದ ೫೭ ರಿಂದ ೬೦ನೇ ಪುಟಗಳಲ್ಲಿ ವಿವರವಾಗಿ ವಿಶ್ಲೇಷಿಸಲಾಗಿದೆ. ಆದರೆ ಕಾಂಗ್ರೆಸ ಪಕ್ಷದ ಜಾತಕದಲ್ಲಿ ಗುರುವು ಯೋಗಕಾರಕನೂ, ಲಗ್ನೇಶ, ದಶಮೇಶನಾಗಿಯೂ ಕೇಂದ್ರದಲ್ಲಿ ಗಜಕೇಸರಿಯೋಗದೊಂದಿಗೆ ಬಲಾಢ್ಯನಾಗಿ ಕೇಂದ್ರದಲ್ಲಿ ವಿರಾಜಿತನಾಗಿದ್ದಾನೆ ಆದರೆ ಅವನು ರಾಶಿ ಬಲದವನಿರುವದಿಲ್ಲ. ಶನಿಯು ರಾಶಿ ಬಲದವನೂ, ಸ್ಥಾನ ಬಲದವನೂ, ಇದ್ದರೂ ಈ ಲಗ್ನಕ್ಕೆ ಯೋಗಕಾರಕನಿರುವದಿಲ್ಲ. ಇಷ್ಟೇ ಅಲ್ಲ ರವಿ, ಶನಿಯರ ಪ್ರತಿಯೋಗ ಚತುರ್ಥ-ದಶಮದಲ್ಲಿರುತ್ತದೆ. ಅಂದರೆ ಎಡ ಪಕ್ಷದ ಧೋರಣೆಯು ಕಾರ್ಯಾಚರಣೆಗೆ ತೊಂದರೆ ಉದ್ಭವಿಸುತ್ತದೆ, ಅರ್ಥಾತ್ ಪಕ್ಷದ ಅಸ್ತಿತ್ವಕ್ಕೇ ಧಕ್ಕೆ ಉಂಟಾಗುವ ಮಟ್ಟಿಗೆ ವಿಚಾರವಿಭಿನ್ನತೆ ಉಂಟಾಗುತ್ತದೆ.

೨) ಮೀನ ಲಗ್ನದ ಯೋಗಕಾರಕ ಗ್ರಹವಾದ ಗುರುವು ಶತ್ರು ಕ್ಷೇತ್ರದಲ್ಲಿದ್ದಾನೆ. ಚತುರ್ಥಾಧಿಪತಿಯಾದ ಬುಧನೂ ಕೂಡ ಸ್ಥಾನಬಲದವನಿದ್ದರೂ ರಾಶಿ ಬಲದವನಿರುವದಿಲ್ಲ. ಅಲ್ಲದೇ ಮಧ್ಯಮ ಧೋರಣೆಗಳ ಪೂರಕಗಳಾದ ಶುಕ್ರ, ಚಂದ್ರರು, ಬಲಾಢ್ಯರಿದ್ದಾರೆ. ಆದುದರಿಂದ ಈ ಪಕ್ಷವು ಎಡ ಬಲ, ಮಧ್ಯಮ ಧೋರಣೆಗಳ ಸಮ್ಮಿಶ್ರ ಪಕ್ಷವಾಗಿದೆ. ಆದರೂ ಬಲಧೋರಣೆಗಳ ಕಾರಕಗ್ರಹವಾದ ಗುರುವು ಲಗ್ನೇಶನಿರುವದರಿಂದ, ತುಸು ಬಲಧೋರಣೆಗಳ ಕಡೆಗೆ ಒಲವು ಹೆಚ್ಚಿರುತ್ತದೆ.

೩) ಅಧಿಕಾರ ಪ್ರಾಪ್ತಿಯ ಕಾರಕ ಗ್ರಹವಾದ ರವಿಯೂ ಬಲಾಢ್ಯನಾಗಿ ದಶಮದಲ್ಲಿ ವಿರಾಜನಾಗಿರುವದರಿಂದಲೂ ವಿರೋಧೀ ಪಕ್ಷಗಳ ದಮನಕಾರಕ ಗ್ರಹಗಳಾದ ಮಂಗಳ-ರಾಹುಗಳು ಬಲಾಢ್ಯರಾಗಿ ಷಷ್ಠದಲ್ಲಿ ಇರುವದರಿಂದಲೂ ಈ ಪಕ್ಷಕ್ಕೆ ಆಡಳಿತ ವಹಿಸಿಕೊಳ್ಳುವ, ಆಡಳಿತ ನೆರವೇರಿಸುವ ಸುಯೋಗ, ಅಧಿಕಾರ, ಬಹುಕಾಲದ ವರೆಗೆ ಹಾಗೂ ಮೇಲಿಂದ ಮೇಲೆ ಪ್ರಾಪ್ತಿಯಾಗುತ್ತದೆ.

೪) ೧೯೦೭, ೧೯೧೮-೧೯, ೧೯೩೬-೩೭ ಈ ಕಾಲದಲ್ಲಿ ಸಾಡೇಸಾತಿ, ಅಷ್ಟಮ ಶನಿ ಮೊದಲಾದ ಗೋಚರಿ ಗ್ರಹಗಳ ಅಶುಭಯೋಗದಿಂದ ಈ

ಪಕ್ಷಕ್ಕೆ ದೊಡ್ಡ ಪ್ರಮಾಣದ ಹಾನಿಯಾದದ್ದು, ಜ್ಯೋತಿಷ್ಯ ಶಾಸ್ತ್ರದ ಮಹತ್ವದ ದೃಷ್ಟಿಯಿಂದ ಉಲ್ಲೇಖಿಸಬಹುದು.

**ಮಾದರಿ ೨:** ರಾಷ್ಟ್ರೀಯ ರಾಜಕೀಯ ಪಕ್ಷಗಳಲ್ಲೊಂದಾದ **ಭಾರತೀಯ ಜನಸಂಘ** ಪಕ್ಷದ ಜಾತಕವನ್ನು ಪರಿಶೀಲಿಸುವಾ.

ಈ ಪಕ್ಷವು ಕಾನಪೂರದಲ್ಲಿ ೨೧-೧೦-೧೯೫೧ರ ಸಾಯಂಕಾಲ ೪ರಿಂದ ೬ ಘಂಟೆಯ ವೇಳೆಗೆ ಆದರೆ, ಮೀನ ಲಗ್ನದ, ಮಿಥುನ ರಾಶಿಯಲ್ಲಿ ಜನ್ಮ ತಾಳಿದ್ದು, ಇದರ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| ಲಗ್ನ ಗುರು | — | — | ಚಂದ್ರ |
| ರಾಹು | ಭಾರತೀಯ ಜನಸಂಘದ ಜಾತಕ | | — |
| — | | | ಶುಕ್ರ ಮಂಗಳ ಕೇತು |
| — | — | ರವಿ ಬುಧ | ಶನಿ |

೧। ಈ ಪಕ್ಷದ ಜಾತಕದ ಲಗ್ನೇಶ, ದಶಮೇಶ, ಹಾಗೂ ಈ ಲಗ್ನದ ಯೋಗಕಾರಕ ಗ್ರಹವಾದ ಗುರುವು ಬಲಾಢ್ಯನಾಗಿ ಲಗ್ನದಲ್ಲಿ ಸ್ವಕ್ಷೇತ್ರದಲ್ಲಿ ವಿರಾಜಿತನಾಗಿದ್ದಾನೆ. ಗುರುವು ಬಲಧೋರಣೆಗಳ ಕಾರಕ ಗ್ರಹವಿರುವದರಿಂದ ಈ ಪಕ್ಷವು ಬಲಧೋರಣೆಗಳನ್ನು ಬೆಂಬಲಿಸುವ ಬಲಾಢ್ಯ ಪಕ್ಷವಾಗಿ ಬೆಳೆಯುವದರಲ್ಲಿ ಸಂದೇಹವಿಲ್ಲ.

೨) ಈ ಪಕ್ಷದ ಜಾತಕದಲ್ಲಿ ಗುರುವು ಬಲಾಢ್ಯನಾಗಿ ಲಗ್ನದಲ್ಲಿರುವದರಿಂದ, ದೊಡ್ಡ ನಗರ, ಪಟ್ಟಣಗಳಲ್ಲಿ ಜನಪ್ರಿಯವಾಗುತ್ತದೆ. ತತ್ಪರಿಣಾಮವಾಗಿ ರಾಜ್ಯ ಸಭೆ, ವಿಧಾನ ಪರಿಷತ್ತುಗಳಲ್ಲಿ ಈ ಪಕ್ಷಕ್ಕೆ ಹೆಚ್ಚು ಸ್ಥಾನಗಳು ಲಭಿಸುತ್ತವೆ.

೩) ಈ ಪಕ್ಷದ ಜಾತಕದಲ್ಲಿ ರವಿಯು ನಿರ್ಬಲನಿರುವದರಿಂದ ರಾಜಕೀಯ ಚುನಾವಣೆಗಳಲ್ಲಿ ಕಠಿಣ ಪರಿಸ್ಥಿತಿ ಎದುರಿಸಬೇಕಾಗುತ್ತದೆ.

೪) ಗುರು, ಚಂದ್ರ, ಬುಧ, ಮಂಗಳ ಶನಿಯರು ಈ ಪಕ್ಷದ ಜಾತಕದಲ್ಲಿ ಬಲಾಢ್ಯರಿದ್ದಾರೆ. ಅದರಲ್ಲಿಯೂ ಗುರು, ಚಂದ್ರರೂ ಹೆಚ್ಚು ಬಲಿಷ್ಠರಿದ್ದಾರೆ. ಆದುದರಿಂದ ಶೈಕ್ಷಣಿಕ ಸಂಸ್ಥೆಗಳಾದ ವಿಶ್ವವಿದ್ಯಾಲಯದ ಸಿಂಡಿಕೇಟ, ಸಿನೇಟ, ವಿದ್ಯಾಮಂಡಳ, (Accedemic Council) ಮೊದಲಾದವುಗಳ ಸದಸ್ಯತ್ವ ಹೆಚ್ಚಿನ ಪ್ರಮಾಣದಲ್ಲಿ ಪಡೆಯುತ್ತದೆ. ಇದಲ್ಲದೇ ಬುಧ ಗುರು, ಶನಿಯರು ಬಲಾಢ್ಯರಿರುವದರಿಂದ ಸಾಂಸ್ಕೃತಿಕ, ಧಾರ್ಮಿಕ, ಸಾಹಿತ್ಯಿಕ, ಸ್ಥಾನಿಕ, ಸಹಕಾರಿ, ಮೊದಲಾದ ಸಂಸ್ಥೆಗಳ ಚುನಾವಣೆಯಲ್ಲಿ ಹೆಚ್ಚು ಯಶಸ್ಸು ಪಡೆಯುತ್ತದೆ, ಆದರೆ ಶನಿಯು ಹೆಚ್ಚು ಬಲಾಢ್ಯನಿರುವದಿಲ್ಲ, ಅಥವಾ ಗುರುವಿನಗಿಂತ ಶನಿಯು ನಿರ್ಬಲದ್ದಾನೆ. ಆದುದರಿಂದ ಕಾರ್ಮಿಕ ಸಂಸ್ಥೆಗಳ ಚುನಾವಣೆಯಲ್ಲಿ ಯಶಸ್ಸು ಪಡೆಯಲಾರದು.

೫) ಈ ಪಕ್ಷದ ಜಾತಕದಲ್ಲಿ ರವಿ, ಶನಿಯರಿಗಿಂತ ಗುರು, ಬುಧ, ಚಂದ್ರರು ಬಲಾಢ್ಯರಿರುವದರಿಂದ ಹಾಗೂ ಲಗ್ನ, ಚತುರ್ಥ, ಪಂಚಮ, ಭಾಗ್ಯ ಈ ಸ್ಥಾನಗಳು ಪೋಷಕವಿರುವದರಿಂದ ಅಪ್ರತ್ಯಕ್ಷ ಚುನಾವಣೆಯಲ್ಲಿ ಯಶ ಪಡೆದು, ಅಧಿಕಾರ ಪ್ರಾಪ್ತಿಯಾಗುತ್ತದೆ.

೬) ಈ ಪಕ್ಷದ ಸಪ್ತದಲ್ಲಿ ಶುಕ್ರ, ಮಂಗಳರ ಯೋಗವಿರುವದರಿಂದ ಇತರ ಸಣ್ಣ ಪುಟ್ಟ ಪಕ್ಷಗಳು ಈ ಪಕ್ಷದಲ್ಲಿ ವಿಲೀನಗೊಳ್ಳುತ್ತವೆ.

೭) ಈ ಪಕ್ಷದ ಜಾತಕದಲ್ಲಿ ಲಗ್ನೇಶನಾದ ಗುರುವು ಲಗ್ನದಲ್ಲಿಯೂ ಚತುರ್ಥೇಶನಾದ ಬುಧನು ಮಿತ್ರ ಕ್ಷೇತ್ರದಲ್ಲಿಯೂ ಭಾಗ್ಯೇಶನಾದ ಮಂಗಳನು ಬಲಾಢ್ಯನಾಗಿ, ಸಪ್ತದಲ್ಲಿಯೂ ಪಂಚಮೇಶನಾದ ಚಂದ್ರನು ಚತುರ್ಥದಲ್ಲಿ ಇರುವದರಿಂದ ಈ ಪಕ್ಷವು 'ಅಖಿಲ ಭಾರತೀಯ' ಮಟ್ಟದ ಪಕ್ಷವಾಗಿದೆ.

ಮಾದರಿ ೩ : ರಾಷ್ಟ್ರೀಯ ರಾಜಕೀಯ ಪಕ್ಷಗಳಲ್ಲೊಂದಾದ ಸ್ವತಂತ್ರ ಪಕ್ಷದ ಜಾತಕವನ್ನು ಪರಿಶೀಲಿಸುವಾ.

ರಾಜಾಜಿಯವರ ಸ್ವತಂತ್ರ ಪಕ್ಷವು ಮುಂಬಯಿಯಲ್ಲಿ ೧-೮-೧೯೫೯ ರಂದು ಮುಂಜಾನೆ ೧೦-೩೦ ಕ್ಕೆ ಕನ್ಯಾ ಲಗ್ನದ ಮಿಥುನ ರಾಶಿಯಲ್ಲಿ ಜನ್ಮತಾಳಿದ್ದು, ಇದರ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| ಕೇತು | — | — | ಚಂದ್ರ |
| — | ಸ್ವತಂತ್ರ ಪಕ್ಷದ ಜಾತಕ | | ರವಿ ಬುಧ |
| — | | | ಮಂಗಳ ಶುಕ್ರ |
| ಶನಿ | — | ಗುರು | ಲಗ್ನ ರಾಹು |

೧) ಈ ಲಗ್ನದ ಯೋಗಕಾರಕ ಗ್ರಹವು, ಚತುರ್ಥೇಶನೂ ಆದ ಗುರುವು ಚತುರ್ಥದಲ್ಲಿರುವುದರಿಂದಲೂ, ಲಗ್ನೇಶ, ದಶಮೇಶನಾದ ಬುಧನು ಲಾಭದಲ್ಲಿರುವುದರಿಂದಲೂ, ಈ ಪಕ್ಷವು ಬಲ ಘೋಷಣೆಗಳನ್ನು ಬೆಂಬಲಿಸುವ ಪಕ್ಷವಾಗಿದೆ.

೨) ಶನಿ, ಚಂದ್ರರ ಪ್ರತಿಯೋಗ ಚತುರ್ಥ, ದಶಮದಲ್ಲಿಯೂ ಶನಿಯು ನಿರ್ಬಲನಾಗಿ ಚತುರ್ಥದಲ್ಲಿಯೂ ಇರುವುದರಿಂದ ಜನಸಾಮಾನ್ಯರು ಬೆಂಬಲ ಈ ಪಕ್ಷಕ್ಕೆ ದೊರೆಯಲಾರದು.

೩) ಚತುರ್ಥೇಶನು ದ್ವಿತೀಯದಲ್ಲಿರುವುದರಿಂದ ಹಾಗೂ ಲಗ್ನೇಶ, ದಶಮೇಶನಾದ ಬುಧನು ರವಿಯೊಂದಿಗೆ ಲಾಭದಲ್ಲಿ ಇರುವುದರಿಂದ ಜಮೀನದಾರರ, ಬುದ್ಧಿಜೀವಿಗಳ, ನಿವೃತ್ತ ಅಧಿಕಾರಗಳ, ಉದ್ದಿಮೆದಾರರ, ಮೊದಲಾದವರ ಬೆಂಬಲವನ್ನು ಈ ಪಕ್ಷವು ಪಡೆಯುವುದರಲ್ಲಿ ಆಶ್ಚರ್ಯವಿಲ್ಲ.

೪) ನೀರ ಚುನಾವಣೆಯ ಕಾರಕ ಗ್ರಹಗಳು ಈ ಜಾತಕಕ್ಕೆ ಬಲಾಢ್ಯರಿರುವದರಿಂದ ನೀರ ಚುನಾವಣೆಯಲ್ಲಿ ಯಶಸ್ಸು ಗಳಿಸುವ ಅಭ್ಯರ್ಥಿಗಳೇ ಈ ಪಕ್ಷದಿಂದ ಸ್ಪರ್ಧಿಸಬಹುದಾಗಿದೆ.

**ಮಾದರಿ ೪: ರಾಜ್ಯ ಮಟ್ಟದ ರಾಜಕೀಯ ಪಕ್ಷಗಳಲ್ಲೊಂದಾದ ಜನತಾ ಪಕ್ಷದ ಜಾತಕ.**

ರಾಜ್ಯ ಮಟ್ಟದ ರಾಜಕೀಯ ಪಕ್ಷಗಳಲ್ಲೊಂದಾದ ಜನತಾ ಪಕ್ಷವು ೨೮-೪-೧೯೭೭ನೇ ಮುಂಜಾನೆ ೧೦-೧೫ ಘಂಟೆಗೆ ಮಿಥುನ ಲಗ್ನದ ಮೀನ ರಾಶಿಯಲ್ಲಿ ಜನ್ಮತಾಳಿದ್ದು, ಈ ಪಕ್ಷದ ಜಾತಕದ ಕೆಲವು ವಿಚಿತ್ರ ಯೋಗಗಳ ವಿಶ್ಲೇಷಣೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.



| | | | |
|---|---|---|---|
| ಬುಧ ಚಂದ್ರ | ರವಿ ಶುಕ್ರ | ಗುರು ರಾಹು | ಲಗ್ನ |
| ಶನಿ. | ಜನತಾ ಪಕ್ಷದ ಜಾತಕ | | — |
| — | | | ಮಂಗಳ |
| — | ಕೇತು | — | — |

೧) ತೃತೀಯಾಧೀಶನಾದರವಿಯು ಬಲಾಢ್ಯನಾಗಿ ಲಾಭದಲ್ಲಿ ವಿರಾಜಿತನಾಗಿದ್ದಾನೆ. ತೃತೀಯ ಭಾವದ ಕಾರಕನಾದ ಕುಜನು ತೃತೀಯದಲ್ಲಿ ಬಲಾಢ್ಯನಿದ್ದಾನೆ ಅಲ್ಲದೆ, ರವಿ, ಕುಜರ ಅನ್ಯೋನ್ಯ ರಾಶಿಯೋಗವೂ ಇರುತ್ತದೆ. ಈ ಕಾರಣದಿಂದಲೇ ಚುನಾವಣೆಯ ಸಮಯದಲ್ಲಿ ಇತರ ಪಕ್ಷಗಳೊಂದಿಗೆ ಈ ಪಕ್ಷವು ಚುನಾವಣಾ ಮೈತ್ರಿಯನ್ನು ಯಾವಾಗಲೂ ಮಾಡಿ ಕೊಳ್ಳುತ್ತದೆ, ಅಥವಾ ಈ ಪಕ್ಷದ ಅನೇಕ ಸದಸ್ಯರು ಗುಂಪು ಗುಂಪಾಗಿ ಬೇರೆ ಪಕ್ಷಗಳಿಗೆ ಹೋಗುತ್ತಾರೆ ಇಲ್ಲವೆ, ಬೇರೆ ಪಕ್ಷಗಳಿಂದ ಗುಂಪು, ಗುಂಪಾಗಿ ಸದಸ್ಯರು ಈ ಪಕ್ಷಕ್ಕೆ ಸೇರುತ್ತಾರೆ.

೨) ಜನತಾ ಪಕ್ಷವು ಇನ್ನುಳಿದ ಪಕ್ಷಗಳೊಡನೆ ಎಷ್ಟು ಬೇಗ ಮತ್ತು ಎಷ್ಟು ಸುಲಭವಾಗಿ ಮೈತ್ರಿ ಮಾಡಿಕೊಳ್ಳುವದೋ ಅಷ್ಟೇ ತೀವ್ರವಾಗಿ ಆ ಪಕ್ಷದೊಂದಿಗೆ ವಿರಸ ಮಾಡಿಕೊಳ್ಳುತ್ತದೆ ಇದಕ್ಕೆ ಎರಡು ಕಾರಣಗಳಿವೆ ಮೊದಲನೆಯದಾಗಿ ಕುಜ, ಶನಿಯರ ಸಮ ಸಪ್ತಕ ಯೋಗವು ತೃತೀಯ-ಭಾಗ್ಯ ಸ್ಥಾನಗಳಲ್ಲಿದೆ. ಎರಡನೆಯದಾಗಿ ಲಾಭಸ್ಥಾನದಲ್ಲಿರುವ ತೃತಿಯೇಶನಾದ ರವಿಯ ಮೇಲೆ ಬಲಾಢ್ಯ ಶನಿಯ ದೃಷ್ಟಿ ಇದೆ.

೩) ಲಗ್ನೇಶ, ಚತುರ್ಥೇಶನಾದ ಬುಧನು ನೀಚ ರಾಶಿಯಲ್ಲಿಯೂ ಮಿಥುನ ಲಗ್ನದ ಯೋಗಕಾರಕ ಗ್ರಹವಾದ ಗುರುವು ವ್ಯಯದಲ್ಲಿಯೂ ಇರುವದರಿಂದ ಈ ಪಕ್ಷವು ಅಖಿಲ ಭಾರತ ವ್ಯಾಪ್ತಿಯ ಪಕ್ಷವಾಗದೆ ರಾಜ್ಯಮಟ್ಟದ ಪ್ರಭಾವಿ ಪಕ್ಷವಾಗುತ್ತದೆ.

೪) ನೇರವಾದ ಚುನಾವಣೆಯಲ್ಲಿ ಮಾತ್ರ ಈ ಪಕ್ಷಕ್ಕೆ ಜಯ ಲಭಿಸುತ್ತದೆ.

೫) ಬುಧ, ಗುರು, ಶುಕ್ರರು, ಈ ಪಕ್ಷದ ಜಾತಕದಲ್ಲಿ ದುರ್ಬಲರು ಇರುವದರಿಂದ ಶೈಕ್ಷಣಿಕ, ಸಾಂಸ್ಕೃತಿಕ, ಸಾಹಿತ್ತಿಕ, ಧಾರ್ಮಿಕ ಮೊದಲಾದ ಸಂಸ್ಥೆಗಳಲ್ಲಿ ಅಪಯಶ ಹೊಂದುವದಲ್ಲದೇ ಅಪ್ರತ್ಯಕ್ಷ ಚುನಾವಣೆಗಳಲ್ಲಿಯೂ ಅಪಯಶ ಇರುತ್ತದೆ.

೬) ರವಿ-ಶನಿ- ಮಂಗಳರು ಬಲಾಢ್ಯರಿರುವದರಿಂದ ನೇರ ಚುನಾವಣೆಗಳಲ್ಲಿಯೂ ರಾಜಕೀಯ, ಕಾರ್ಮಿಕ, ಸ್ಥಾನಿಕ ಸಂಸ್ಥೆಗಳಲ್ಲಿಯ ಚುನಾವಣೆಗಳಲ್ಲಿಯೂ ಈ ಪಕ್ಷ ಯಶಸ್ಸು ಪಡೆಯುತ್ತದೆ.

೭) ೧೯೭೦ ರಲ್ಲಿ ಈ ಪಕ್ಷಕ್ಕೆ ಸಾಡೇಸಾತಿ ಹಾಗೂ ಅಷ್ಟಮ ಗುರುವಿನ ಅನಿಷ್ಟ ಪ್ರಭಾವದಿಂದ ಈ ಪಕ್ಷದ ಅಸಂಖ್ಯ ಸದಸ್ಯರು ಪಕ್ಷತ್ಯಾಗ ಮಾಡಿದ್ದು, ಜ್ಯೋತಿಷ್ಯ ಶಾಸ್ತ್ರದ ದೃಷ್ಟಿಯಲ್ಲಿ ಗಮನಾರ್ಹ ವಿಷಯವಾಗಿದೆ.

## ಮಾದರಿ ೫ : ಕರ್ನಾಟಕ ರಾಜ್ಯೋದಯದ ಜಾತಕವನ್ನು ಪರಿಶೀಲಿಸುವಾ.

ಕರ್ನಾಟಕ ರಾಜ್ಯದ ಭವಿಷ್ಯ ನುಡಿಯುವಾಗ ಹಾಗೂ ಕರ್ನಾಟಕದಲ್ಲಿಯ ಯಾವುದೇ ಪ್ರಕಾರದ ಸಂಸ್ಥೆಗಳ ಚುನಾವಣೆಗಳ ಯಶಸ್ಸಿನ ವಿಷಯಕ್ಕೆ ವಿಶ್ಲೇಷಿಸುವಾಗ ಕರ್ನಾಟಕ ರಾಜ್ಯೋದಯದ ಜಾತಕ ಪರಿಶೀಲಿಸುವದು ಅಗತ್ಯವಿದೆ. ಕರ್ನಾಟ ರಾಜ್ಯವು ಹಿಂದಿನ ರಾಷ್ಟ್ರಪತಿಗಳಾದ ದಿ. ರಾಜೇಂದ್ರ ಪ್ರಸಾದರ ಸಮ್ಮುಖದಲ್ಲಿ ೧-೧೧-೧೯೫೬ ರ ಮಧ್ಯಾಹ್ನ ಮೂರು ಘಂಟೆ ಐದು ನಿಮಿಷಕ್ಕೆ ಕುಂಭ ಲಗ್ನದ ತುಲಾ ರಾಶಿಯಲ್ಲಿ ಜನನವಾಗಿದ್ದು, ಇದರ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| — | — | ಕೇತು | — |
| ಲಗ್ನ ಮಂಗಳ | ಕರ್ನಾಟಕ | | — |
| — | ರಾಜ್ಯೋದಯದ ಜಾತಕ | | — |
| — | ಶನಿ ರಾಹು | ರವಿ, ಚಂದ್ರ ಬುಧ | ಗುರು ಶುಕ್ರ |

೧) ಈ ರಾಜ್ಯೋದಯದ ಜಾತಕದಲ್ಲಿ ರವಿಯು ನಿರ್ಬಲನಿರುವದರಿಂದ ಕೇಂದ್ರ ಸರಕಾರದ ಸಹಾಯ, ಸಹಾನುಭೂತಿಗಳಿಗೆ ಯಾವಾಗಲೂ ಈ ರಾಜ್ಯವು ಎರವಾಗುತ್ತದೆ ಅಥವಾ ರಾಜ್ಯದ ನ್ಯಾಯವಾದ ಬೇಡಿಕೆಗಳು ನಿರ್ಲಕ್ಷಿಸಲ್ಪಡುತ್ತದೆ, ಇಲ್ಲವೇ ರಾಜ್ಯದ ಅಭಿವೃದ್ಧಿಯ ಕೆಲಸಗಳಾದ ಆಕಾಶವಾಣಿ, ನೀರಾವರಿ, ನದಿ-ನೀರಿನ, ಗಡಿ-ತಂಟೆ, ಕಾರಖಾನೆ, ವಿಮಾನ ನಿಲ್ದಾಣ, ಅಂಚೆ ವ್ಯವಸ್ಥೆ, ಮೊದಲಾದ ಕೆಲಸಗಳು ವಿಲಂಬದಿಂದ ಪೂರೈಸುತ್ತವೆ.

೨) ಮುಂಬರುವ ಮೂರು ವರ್ಷಗಳ ವರೆಗೆ ರಾಜ್ಯೋದಯದ ಜಾತಕಕ್ಕೆ ಅಷ್ಟಮ ಶನಿಯ ಅನಿಷ್ಟ ಪ್ರಭಾವವಿರುವದರಿಂದ ರಾಜ್ಯಕ್ಕೆ ಭದ್ರ, ಸ್ಥಿರ, ಸರಕಾರ ಬರಲಾರದು ಅಥವಾ ಪಕ್ಷಗಳ ಆಂತರಿಕ ಕಲಹದಿಂದ ಇಲ್ಲವೇ ಪಕ್ಷಾಂತರದ ಪಿಡುಗಿನಿಂದ ಬಹುದಿನಗಳ ವರೆಗೆ ರಾಷ್ಟ್ರಪತಿಯ ಆಡಳಿತವೇ ಇರುತ್ತದೆ

**ಮಾದರಿ ೬ : ಬಾಂಬೆ ಬುಲಿಯನ್ ಮಾರ್ಕೆಟಿನ ಜಾತಕ.**

ಬಾಂಬೆ ಬುಲಿಯನ್ ಮಾರ್ಕೆಟವು ೨೪–೧–೧೯೨೪ ರಂದು ವೃಷಭ ಲಗ್ನದ ಮೇಷರಾಶಿಯ ಅಶ್ವಿನಿ ನಕ್ಷತ್ರದಲ್ಲಿ ಜನನವಾಗಿದ್ದು, ಈ ಜಾತಕದ ವಿಶ್ಲೇಷಣೆ ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| ಕೇತು ಮಂಗಳ | ಚಂದ್ರ | ಲಗ್ನ | — |
| — | ಬಾಂಬೆ ಬುಲಿಯನ್ ಮಾರ್ಕೆಟಿನ ಜಾತಕ | | — |
| ರವಿ ಬುಧ | | | — |
| — | ಶುಕ್ರ | ಗುರು | ಶನಿ ರಾಹು |

೧) ಈ ಜಾತಕದಲ್ಲಿ ರವಿಯು ಶತ್ರು ಕ್ಷೇತ್ರದಲ್ಲಿಯೂ ಶನಿ, ಮಂಗಳರ ಪ್ರತಿಯೋಗ ಲಾಭ ಪಂಚಮದಲ್ಲಿಯೂ ಇರುವದರಿಂದ ಈ ಸಂಸ್ಥೆಗೆ ಸರಕಾರದಿಂದ ಮೇಲಿಂದ ಮೇಲೆ ಹೊಡತ ಬೀಳುತ್ತದೆ. ಇಷ್ಟೇ ಅಲ್ಲ, ಈ ಸಂಸ್ಥೆಯ ಏರಿಳಿತವು ತೀವ್ರಗತಿಯಿಂದ ಆಗುತ್ತದಲ್ಲದೇ ಸಂಸ್ಥೆಯ ಅಸ್ಥಿತ್ವವನ್ನೇ ಪ್ರಶ್ನಿಸುವ ಸಮಸ್ಯೆಗಳೂ ಸಹ ಅನೇಕ ಬಾರಿ ಉದ್ಭವಿಸುತ್ತವೆ.

ಈ ಸಂಸ್ಥೆಗೆ ೧೯೬೯ರಿಂದ ೧೯೭೨ರ ವರೆಗಿನ ಸಾಡೇಸಾತಿಯ ಹಾಗೂ ಷಷ್ಟಾಷ್ಟಮ ಗೋಚರಿ ಗುರುವಿನ ಪ್ರಭಾವದಿಂದ ಸಾಮಾಜಿಕ ನಿಯಂತ್ರಣ

ಬ್ಯಾಂಕ ರಾಷ್ಟ್ರೀಕರಣ, ಮೊದಲಾದ ಘಟನೆಗಳಿಂದ ಸಂಸ್ಥೆಯ ಅಸ್ತಿತ್ವ-ವನ್ನೇ ಪ್ರಶ್ನಿಸುವ ಸಂಗತಿಗಳು ಜ್ಯೋತಿಷ್ಯ ದೃಷ್ಟಿಯಲ್ಲಿ ಗಮನಾರ್ಹ ಅಂಶವಾಗಿದೆ.

**ಮಾದರಿ ೭: ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಜಾತಕ.**

೧-೩-೧೯೬೨ ರಂದು ಉತ್ತರ ಕರ್ನಾಟಕದ ಎರಡು ಮಹಾನಗರಗಳಾದ ಧಾರವಾಡ ಹಾಗೂ ಹುಬ್ಬಳ್ಳಿಗಳು ಕೂಡಿ ಒಂದಾದವು. ಏಕೀ-ಕೃತವಾದ ನಗರದ್ವಯಕ್ಕೊಂದು ಕಾರ್ಪೋರೇಶನ್ ಅಂದಿನಿಂದ ಅಸ್ತಿತ್ವದಲ್ಲಿ ಬಂದಿತು. ಅಂದು ಮುಂಜಾನೆ ಸರಿಯಾಗಿ ೧೦-೧೫ ಕ್ಕೆ ಮೈಸೂರ ರಾಜ್ಯದ ಮಾಜೀ ಮುಖ್ಯ ಮಂತ್ರಿಗಳಾದ ಶ್ರೀಮಾನ ಬಸಪ್ಪ ದಾನಪ್ಪ ಜತ್ತಿಯವರಿಂದ ಉದ್ಘಾಟಿಸಲ್ಪಟ್ಟಿತು. ಅರ್ಥಾತ್ ೧-೩-೧೯೬೨ರ ಮುಂಜಾನೆ ಹತ್ತು ಘಂಟೆ, ಹದಿನೈದು ನಿಮಿಷಕ್ಕೆ, ಈ ಪೌರ ಸಭೆಯು ಜನನವಾಯಿತು. ಈ ಪುತ್ರೋತ್ಸವದಿಂದ ಎರಡೂ ನಗರಗಳ ಏಕೀಕೃತರಾದ ನಾಗರಿಕರು ಅತ್ಯಂತ ಆನಂದಭರಿತರಾಗಿದ್ದಾರೆ. ಮಹಾ ನಗರಸಭೆಯ ಭವಿಷ್ಯ ನುಡಿಯುವಾಗ ಹಾಗೂ ಈ ಸಂಸ್ಥೆಯ ಯಾವದೇ ಪ್ರಕಾರದ ಚುನಾವಣೆಗಳ ಯಶಾಪಯಶ ವಿಶ್ಲೇಷಿಸುವಾಗ ಮಹಾನಗರ ಪಾಲಿಕೆಯ ಜಾತಕ ಪರಿಶೀಲಿಸುವದು ಅತ್ಯವಶ್ಯವಿರುವದರಿಂದ ಈ ಕೆಳಗಿನಂತೆ ಇದರ ವಿಶ್ಲೇಷಣೆ ಮಾಡಲಾಗಿದೆ.

| | | | |
|---|---|---|---|
| — | ಲಗ್ನ | — | — |
| ರವಿ ಗುರು ಶುಕ್ರ | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಜಾತಕ | | ರಾಹು |
| ಬುಧ ಶನಿ ಮಂಗಳ ಕೇತು | | | — |
| ಚಂದ್ರ | — | — | — |

೧) ಭಾಗ್ಯೇಶ, ಪಂಚಮೇಶ, ಸಪ್ತಮೇಶರ ಶುಭಯೋಗವು ಲಾಭದಲ್ಲಿರುವದದರಿಂದಲೂ ಚತುರ್ಥೇಶನು ಭಾಗ್ಯದಲ್ಲಿರುವದರಿಂದಲೂ ಈ ಸಂಸ್ಥೆಗೆ ರಾಜ್ಯ ಹಾಗೂ ಕೇಂದ್ರ ಸರಕಾರದಿಂದ ಹೆಚ್ಚಿನ ಸಹಾಯ ಸೌಕರ್ಯಗಳು ಒದಗುವವೆಂದು ವ್ಯಕ್ತವಾಗುತ್ತದೆ.

೨) ಅನೇಕ ಗ್ರಹಗಳು ಉದಿತಗೋಲಾರ್ಧದಲ್ಲಿರುವದರಿಂದಲೂ ಭಾಗ್ಯೇಶನು ಲಾಭದಲ್ಲಿರುವದರಿಂದಲೂ ಚತುರ್ಥೇಶನು ಭಾಗ್ಯದಲ್ಲಿರುವದರಿಂದಲೂ ಲಗ್ನೇಶನು ಬಲಾಢ್ಯನಾಗಿ ದಶಮೇಶನೊಂದಿಗೆ ದಶಮದಲ್ಲಿರುವದರಿಂದಲೂ ಈ ಪೌರಸಭೆಯ ಕ್ಷೇತ್ರದಲ್ಲಿ ವಿಮಾನ ನಿಲ್ದಾಣ, ದೊಡ್ಡ ದೊಡ್ಡ ಗಿರಣಿ, ಕಾರ್ಖಾನೆಗಳ ಸ್ಥಾಪನೆ, ರೈಲು ಮಾರ್ಗದ ವಿಸ್ತರಣೆ, ಇವೇ ಅನೇಕ ಪ್ರಕಾರಗಳಿಂದ ಪ್ರಗತಿ ಹೊಂದಿ, ನಗರವು ಸುಂದರ ಸುಸಜ್ಜಿತವಾಗಿ ಬೆಳೆಯುವದನ್ನು ನಾವು ಶೀಘ್ರದಲ್ಲಿ ಕಾಣಬಹುದು.

೩) ಪೌರಸಭೆಯ ಜಾತಕದಲ್ಲಿ ದಶಮಸ್ಥಾನದ ಮಕರ ರಾಶಿಯಲ್ಲಿ ಶನಿ, ಮಂಗಳ, ಬುಧ, ಕೇತು ಈ ನಾಲ್ಕು ಗ್ರಹಗಳ ಯೋಗವೂ ಶನಿ, ಮಂಗಳರ ಯುತಿಯೋಗವು ಇರುವದರಿಂದ ಚುನಾವಣೆಯ ಸಮಯದಲ್ಲಿ ಹಾಗೂ ನಂತರ ಅಧಿಕಾರ ಸ್ಥಾನಕ್ಕೆ ಗುಂಪುಗಾರಿಕೆ ತಲೆ ಎತ್ತಿ, ತೀವ್ರವಾದ ಸ್ಪರ್ಧೆ ನಡೆಯುವದೆಂದು ಹೇಳಬಹುದಾಗಿದೆ.

೪) ೧೯೭೨ ರಿಂದ ೧೯೭೪ ಹಾಗೂ ೧೯೮೦ರಿಂದ ೧೯೮೫ರ ವರೆಗಿನ ಕಾಲ ಪುರಸಭೆಗೆ ಅನುಕೂಲವಿರುವದರಿಂದ ಈ ಕಾಲದಲ್ಲಿ ಅನೇಕ ಉದ್ಯೋಗಾಭಿವೃದ್ಧಿ ಹೊಂದುವವೆಂದು ಹೇಳಬಹುದು.

## ಮಾದರಿ ಕುಂಡಲಿ ೮ ಸಾಹಿತ್ಯ ಪರಿಷತ್ತಿನ ಜಾತಕ

೩-೫-೧೯೧೫ರ ಮಧ್ಯಾಹ್ನ ೩ ಘಂಟೆಗೆ ಬೆಂಗಳೂರಿನ ಸರಕಾರಿ ಪ್ರೌಢಶಾಲಾ ಹಜಾರದಲ್ಲಿ ಮೂಲಾ ನಕ್ಷತ್ರದ ಚತುರ್ಥ ಚರಣದ ಧನು

ರಾಶಿಯು ಸಿಂಹ ಲಗ್ನದಲ್ಲಿ ಈ ಸಂಸ್ಥೆಯು ಜನಿಸಿದ್ದು, ಇದರ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಮಾಡಲಾಗಿದೆ.

೧) ಲಗ್ನದ ಯೋಗಕಾರಕ ಗ್ರಹವೂ, ಲಗ್ನೇಶನೂ ರಾಜಕೀಯ ಯೋಗಕಾರಕ ಗ್ರಹವೂ ಆದ ರವಿಯು ಉಚ್ಚರಾಶಿಯುವನಾಗಿ ಭಾಗ್ಯದಲ್ಲಿ ವಿರಾಜನಾಗಿರುವದರಿಂದ ಈ ಸಂಸ್ಥೆಗೆ ಸರಕಾರದ ಸಹಾಯ, ಸಹಾನುಭೂತಿ ಸಾಕಷ್ಟು ಸಿಗುವದಲ್ಲದೆ, ಸರಕಾರದ ಮೇಲೆಯೂ ಸಮಾಜದ ಮೇಲೆಯೂ ಈ ಸಂಸ್ಥೆಯ ಪ್ರಭಾವ ಬಹಳಷ್ಟಿರುತ್ತದೆ.

| | | | |
|---|---|---|---|
| ಶುಕ್ರ ಮಂಗಳ | ರವಿ ಬುಧ | — | ಶನಿ |
| ಗುರು | ಸಾಹಿತ್ಯ ಪರಿಷತ್ತಿನ ಜಾತಕ | | ಕೇತು |
| ರಾಹು | | | ಲಗ್ನ |
| ಚಂದ್ರ | — | — | — |

೨) ಶನಿ, ಮಂಗಳರ ಅನ್ಯೋನ್ಯ ದೃಷ್ಟಿಯೋಗವಿರುವದರಿಂದಲೂ ಶನಿ, ಚಂದ್ರರ ಪ್ರತಿಯೋಗವಿರುವದರಿಂದಲೂ ಚತುರ್ಥಾಧಿಪತಿಯಾದ ಮಂಗಳನು ಅಷ್ಟಮದಲ್ಲಿರುವದರಿಂದಲೂ ಈ ಸಂಸ್ಥೆಯ ಸದಸ್ಯರಲ್ಲಿ ಗುಂಪಿನ ಪ್ರವೃತ್ತಿ, ವಿಚಾರ ಭೇದದಿಂದ ಯಾವಾಗಲೂ ತಿಕ್ಕಾಟವಿರುತ್ತದೆ.

೩) ಈ ಸಂಸ್ಥೆಯ ಜಾತಕದಲ್ಲಿ ಬುಧ, ಶುಕ್ರ, ಚಂದ್ರರಿಗಿಂತ ರವಿ, ಗುರು, ಶನಿಯರು ಬಲಾಢ್ಯರಿರುವದರಿಂದ ಈ ಸಂಸ್ಥೆಯ ಹೆಸರಿಗೆ ತಕ್ಕಂತೆ ಅಂದರೆ, ಸಾಹಿತ್ಯ, ಕಲಾ ಸಂಸ್ಥೆಗಳಲ್ಲಿಯ ಚುನಾವಣೆಗಳಂತೆ ಇರದೇ ರಾಜಕೀಯ ಚುನಾವಣೆಗಳಂತೆ ತೀವ್ರ ತುರುಸಿನ ಸ್ಪರ್ಧೆಯ ಚುನಾವಣೆಗಳು ಯಾವಾಗಲೂ ನಡೆಯುತ್ತವೆ.

೪) ಈ ಸಂಸ್ಥೆಯ ಜಾತಕವಲ್ಲಿ ನೇರ ಚುನಾವಣೆಯ ಕಾರಕಗ್ರಹ, ಲಗ್ನ, ಸ್ಥಾನಾಧಿಗಳು ಪೋಷಕವೂ ಪೂರಕವೂ ಇರುವದರಿಂದ ನೇರ ಚುನಾವಣೆಯ ಪೋಷಕವಿರುವ ವ್ಯಕ್ತಿಗಳೇ ಹೆಚ್ಚಾಗಿ ಈ ಸಂಸ್ಥೆಯ ಸದಸ್ಯತ್ವವನ್ನು ಪಡೆಯಬಹುದಾಗಿದೆ.

೫) ಸಂಸ್ಥೆಯ ಚತುರ್ಥಾಧಿಪತಿ ಮಂಗಳನು ಅಷ್ಟಮದಲ್ಲಿ ಶನಿ ದುಷ್ಟನಿರುವದರಿಂದಲೂ ಶುಕ್ರ, ಚಂದ್ರರು ನಿರ್ಬಲರಿರುವದರಿಂದಲೂ ಈ ಸಂಸ್ಥೆಯ ಸದಸ್ಯರಲ್ಲಿ ಒಮ್ಮತ ಇರುವದು ಕಡಿಮೆ. ಗುಂಪುಗಾರಿಕೆ ಇರುವದು ತೋರಿಬರುತ್ತದೆ.

೬) ಹೆಸರಿಗೆ ಸಾಹಿತ್ಯಪರಿಷತ್ತು ಇದ್ದರೂ ರಾಜಕೀಯವೇ ಈ ಸಂಸ್ಥೆಯಲ್ಲಿ ಇರುತ್ತದೆ. ಇದಕ್ಕೆ ಕಾರಣ ಸಾಹಿತ್ಯಕಾರಕ ಗ್ರಹವಾದ ಬುಧ, ಶುಕ್ರ, ಚಂದ್ರರಿಗಿಂತ ರಾಜಕೀಯ ಕಾರಕಗ್ರಹಗಳಾದ ರವಿ, ಗುರು, ಶನಿಯರು ಈ ಸಂಸ್ಥೆಯ ಜಾತಕದಲ್ಲಿ ಬಲಾಢ್ಯರಿದ್ದಾರೆ.

೭) ಕೊನೆಯದಾಗಿ ೧೫-೮-೧೯೭೧ ರಿಂದ ೧೫-೧೧-೧೯೭೪ ರ ಕಾಲ ಹಾಗೂ ೧೨-೨-೧೯೮೦ರಿಂದ ೧೫-೧೧-೧೯೮೫ ರ ಕಾಲ ಈ ಸಂಸ್ಥೆಗೆ ಒಳ್ಳೆಯ ಕಾಲವಿರುವದರಿಂದ ಈ ಅವಧಿಯಲ್ಲಿ ಇದರ ಅನೇಕ ಧ್ಯೇಯಗಳು ಪೂರ್ತಿಯಾಗುವದಲ್ಲದೇ, ಹೆಚ್ಚಿನ ಮಟ್ಟದಲ್ಲಿ ಪ್ರಗತಿಯಾಗುತ್ತದೆ.

**ಮಾದರಿ ಕುಂಡಲಿ ೯: ಕರ್ನಾಟಕ ವಿದ್ಯಾವರ್ಧಕ ಸಂಘದ ಜಾತಕ.**

ಕರ್ನಾಟಕವಿದ್ಯಾವರ್ಧಕ ಸಂಘದ ಜನನವು ದಿ. ೨೦-೭-೧೮೯೦ ರ ಸಾಯಂಕಾಲ ೪-೪೫ ರಿಂದ ೫-೦೦ ಘಂಟೆಯ ವರೆಗೆ ವೃಶ್ಚಿಕ ಲಗ್ನದ ಸಿಂಹ ರಾಶಿಯಲ್ಲಿ ಆಗಿದೆಯೆಂದು ತಿಳಿದು ಬಂದಿದೆ. ಕೆಲವರ ಅಭಿಪ್ರಾಯದಲ್ಲಿ ಧನು ಲಗ್ನವೆಂದು ಹೇಳಲಾಗುತ್ತದೆ. ಇದರ ವಿಶ್ಲೇಷಣೆಯನ್ನು ಈ ಕೆಳಗಿನಂತೆ ಕೊಡಲಾಗಿದೆ.

| | | | |
|---|---|---|---|
| — | — | ರಾಹು | — |
| — | ಕರ್ನಾಟಕ ವಿದ್ಯಾ- | | ರವಿ ಬುಧ |
| ಗುರು | ವರ್ಧಕ ಸಂಘದ ಜಾತಕ | | ಶುಕ್ರ ಚಂದ್ರ ಶನಿ |
| — | ಲಗ್ನ ಕೇತು ಮಂಗಳ | — | — |

೧) ಲಗ್ನೇಶ, ಭಾಗ್ಯೇಶ, ದಶಮೇಶರು ಬಲಾಢ್ಯರಿರುವದರಿಂದ ಈ ಸಂಸ್ಥೆಯು ಸಾಹಿತಿಗಳಿಗೆ ಮಾತೃಸಂಸ್ಥೆಯಾಗಿದೆಯಲ್ಲದೇ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೂ ಕಾರಣೀಭೂತವಾಗಿದೆ. ವಾಗ್ಭೂಷಣ ಎಂಬ ಪತ್ರಿಕೆ ಪ್ರಾರಂಭಿಸಿ, ಸಾಹಿತಿಗಳಿಗೆ ಉತ್ತೇಜಕ ಸಂಸ್ಥೆಯಾಗಿದೆ.

೨) ಭಾಗ್ಯೇಶನಾದ ಚಂದ್ರನು ಶನಿಯೊಂದಿಗೂ ಯೋಗಕಾರಕ-ಗ್ರಹವೂ ಚತುರ್ಥಾಧಿಪತಿಯೂ ಆದ ಶನಿಯು ಶತೃ ಕ್ಷೇತ್ರದಲ್ಲಿಯೂ ಇರುವದರಿಂದ ಈ ಸಂಸ್ಥೆಯು ರಾಜಕೀಯ ಪರಿಸ್ಥಿತಿಯ ಒತ್ತಡದಿಂದಲೂ ಜಾತಿಯತೆಯಿಂದಲೂ ಕಾರ್ಯಕರ್ತರ ಚಂಚಲತೆ ಯಿಂದಲೂ ಈ ಸಂಸ್ಥೆಯು ಎಷ್ಟು ವಿಸ್ತಾರವಾಗಿ ಕಾರ್ಯ ಮಾಡಬೇಕಾಗಿತ್ತೋ ಅಷ್ಟನ್ನು ಮಾಡಿಲ್ಲ.

೩) ಕೊನೆಯದಾಗಿ ೧೯೭೨ ರಿಂದ ೧೯೮೧ ರ ಕಾಲ ಹಾಗೂ ೧೯೮೮ ರಿಂದ ೧೯೯೨ ರ ಕಾಲ ಈ ಸಂಸ್ಥೆಗೆ ಅನುಕೂಲ ಕಾಲ ವಿರುವದರಿಂದ ಈ ಅವಧಿಯಲ್ಲಿ ಇದರ ಪ್ರಗತಿಯನ್ನು ನಿರೀಕ್ಷಿಸಬಹುದಾಗಿದೆ,

— ಸಂಪೂರ್ಣ —



# ಇದೇ ಲೇಖಕರ ಇತರ ಗ್ರಂಥಗಳು

## ೧. ವಧೂವರರ ಜ್ಯೋತಿಷ್ಯ

**ಬೆಲೆ : ರೂ. ೨-೦೦** (ತೃತೀಯ ಮುದ್ರಣ)

ಈ ಗ್ರಂಥದಲ್ಲಿ ವಧೂ-ವರರ ಜನ್ಮಟಿಪ್ಪಣಿ(ಕುಂಡಲಿ)ಗಳನ್ನು ಏಕೆ ಹಾಗೂ ಹೇಗೆ ನೋಡಬೇಕು ? ನಾಡಿ, ಯೋನಿ, ಗಣ-ಕೂಟಗಳೆಂದರೇನು? ಇದನ್ನು ಏಕೆ ಹಾಗೂ ಹೇಗೆ ನೋಡಬೇಕು ? ಮಂಗಳ (ಕುಜ) ದೋಷವೆಂದರೇನು ? ಕುಜ (ಮಂಗಳ) ದೋಷವನ್ನು ಹೇಗೆ ಹಾಗೂ ಯಾಕೆ ನೋಡಬೇಕು ? ಅಪವಾದ ಕುಜ ದೋಷವೆಂದರೇನು ? ಇದಲ್ಲದೆ ವಧೂ-ವರರ ವಿವಾಹ ಕಾಲ ಯಾವದು ? ಯಾವ ವರುಷ ಯಾವ ವಯಸ್ಸಿನಲ್ಲಿ ಯಾವ ತಿಂಗಳು ಎಂಬುದನ್ನು ಹೇಗೆ ಕಂಡುಹಿಡಿಯಬೇಕು.

## ೨. ಸ್ತ್ರೀ ಜ್ಯೋತಿಷ್ಯ

**ಬೆಲೆ : ರೂ. ೩-೦೦** (ದ್ವಿತೀಯ ಮುದ್ರಣ)

ಸ್ತ್ರೀಯರ ಜೀವನದ ಅನೇಕ ಮುಖಗಳನ್ನು ಆಧರಿಸಿ ಬರೆದ ವಿಸ್ತಾರ ಪೂರ್ವಕವಾದ ಗ್ರಂಥ. ಇದರಲ್ಲಿ ಸ್ತ್ರೀಯರ ಸ್ವಭಾವ, ಸೌಂದರ್ಯ, ವಿವಾಹ ಕಾಲ, ಪ್ರೇಮವಿವಾಹ, ಪುನರ್ವಿವಾಹ, ಅಂತರಜಾತೀಯ ವಿವಾಹ, ಆಜನ್ಮ ಕುಮಾರಿಯೋಗ, ಘಟಸ್ಫೋಟ, ವೈಧವ್ಯಯೋಗ, ಸಂತತಿ, ಸಂತತಿಸುಖ, ಗರ್ಭಧಾರಣ ಹಾಗೂ ಗರ್ಭಪತನಯೋಗಗಳು, ಗರ್ಭಪ್ರತಿಬಂಧನವನು ಯಾರು ಮಾಡಿಸಿಕೊಳ್ಳಬೇಕು, ವಂಧ್ಯಾಯೋಗ, ವಿದ್ಯೆ, ಭಾಗ್ಯ, ಮನೋವಾಸನೆ, ಆರ್ಥಿಕಸ್ವಾತಂತ್ರ್ಯ, ಸ್ವಾವಲಂಬನ, ರಾಜಕಾರಣಪಟುತ್ವ, ಸಮಾಜಧುರೀಣತ್ವ ಮುಂತಾದ ವಿಷಯಗಳನ್ನು ಆಧುನಿಕ ಸಮಾಜಕ್ಕನುಸರಿಸಿ, ಫಲಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲಿಂದ ಹೇಗೆ ನೋಡಬೇಕೆಂಬುದನ್ನು ವಿವೇಚಿಸಿದೆ.

## ೩. ಸಾಡೇಸಾತಿ

**ಬೆಲೆ : ರೂ. ೧-೭೫** (ದ್ವಿತೀಯ ಮುದ್ರಣ)

ಈ ಗ್ರಂಥದಲ್ಲಿ ಸಾಡೇಸಾತಿ ಅಂದರೇನು? ಸಾಡೇಸಾತಿಯನ್ನು ಹೇಗೆ ಪರೀಶೀಲಿಸಬೇಕು ? ಅನುಕೂಲ, ಪ್ರತಿಕೂಲ, ಸಾಡೆಸಾತಿ ಅಂದರೇನು ?

ರಾಶಿ, ಸ್ಥಾನ, ಗ್ರಹಗಳು ಭಾವ ಭಾವೇಶ ಇದರ ಮೇಲಿಂದ ಶನಿಯು ಭ್ರಮಿಸುವಾಗ ಆಗುವ ಪರಿಣಾಮ, ದಶಾ-ಅಂತರ್ದಶೆಯು ಸಾಡೇಸಾತಿಯ ಪರಿಣಾಮ, ಅಷ್ಟಕವರ್ಗಪದ್ಧತಿಯಿಂದ ಸಾಡೇಸಾತಿಯ ವಿಚಾರ, ಇದಲ್ಲದೆ ೧೯೬೦ ರಿಂದ ೧೯೭೫ರ ವರೆಗೆ ಶನಿಯು ಯಾವ ರಾಶಿಯಲ್ಲಿ ಯಾವ ತಿಂಗಳಲ್ಲಿ ಎಷ್ಟು ಅಂಶ ಇರುವನು ಎಂಬುದರ ಕೋಷ್ಟಕ ಸಹ ಕೊಡಲಾಗಿದೆ.

## ೪. ಪಂಚಾಂಗ ಪ್ರದೀಪ

**ಬೆಲೆ : ರೂ ೧-೫೦ (ದ್ವಿತೀಯ ಮುದ್ರಣ)**

ಹಿಂದೂ ಜೀವನದ ಅವಿಭಾಜ್ಯ ಅಂಗವಾದ ಪಂಚಾಂಗದ ಕೈಪಿಡಿ ಇದು. ಈ ಪುಸ್ತಕದಲ್ಲಿ ಪಂಚಾಗವೆಂದರೇನು ? ಪಂಚಾಂಗವನ್ನು ಹೇಗೆ ನೋಡಬೇಕು? ತಿಥಿಗಳನ್ನು ನಿರ್ಣಯಿಸುವುದು ಹೇಗೆ ? ನಿತ್ಯ ನಕ್ಷತ್ರವನ್ನು ಹೇಗೆ ಕಂಡುಹಿಡಿಯಬೇಕು ? ಮೊದಲಾದ ವಿಷಯಗಳನ್ನು ವಿವೇಚಿಸಲಾಗಿದೆ.

## ೫. ಆಕಸ್ಮಿಕ ಧನಯೋಗ

**ಬೆಲೆ : ರೂ. ೨-೦೦ (ದ್ವಿತೀಯ ಮುದ್ರಣ)**

ಈ ಗ್ರಂಥದಲ್ಲಿ ಆಕಸ್ಮಿಕ ಧನಯೋಗ ಅಂದರೇನು? ಅದನ್ನು ಹೇಗೆ ಪರಿಶೀಲಿಸಬೇಕು? ಇದಲ್ಲದೆ ಸಟ್ಟಾ, ಲಾಟರಿ, ರೇಸು, ಭೂಗತ, ಪ್ರಾಯಿಜ ಬಾಂಡ, ಸ್ತ್ರೀಧನ, (ಸ್ವಸ್ತ್ರೀ ಹಾಗೂ ಪರಸ್ತ್ರೀ), ವಾರಸಾ, ದತ್ತಕ, ಲಂಚ ಕಾಣಿಕೆ, ಕಾಲಾಬಜಾರ ಇವುಗಳ ಮೇಲಿಂದ ಆಕಸ್ಮಿಕ ಧನಲಾಭವನ್ನು, ಹೇಗೆ ಗುರುತಿಸಬೇಕೆಂಬುದನ್ನು ಮಾದರಿ ಕುಂಡಲಿಗಳಿಂದ ವಿವರಿಸಿದೆ.

## ೬. ಉದ್ಯೋಗ ಜ್ಯೋತಿಷ್ಯ

**ಬೆಲೆ : ರೂ. ೫-೦೦**

ಈ ಗ್ರಂಥದಲ್ಲಿ ಉದ್ಯೋಗಗಳಲ್ಲಿಯ ಪ್ರಕಾರಗಳು, ಕಾರಕಗ್ರಹ, ಲಗ್ನ, ಸ್ಥಾನ, ರಾಶ್ಯಾಧಿಪತಿಗಳನ್ನು ಕುರಿತು ಸುದೀರ್ಘವಾಗಿ ವಿವೇಚಿಸಲಾಗಿದ್ದು, ಜ್ಯೋತಿಷ್ಯ ಶಾಸ್ತ್ರದಲ್ಲಿಯೇ ಇದೊಂದು ನೂತನ ಸಂಶೋಧನಾತ್ಮಕ ಗ್ರಂಥವು.

ಜೀವನರಂಗವನ್ನು ಪ್ರವೇಶಿಸಿದ ಉದ್ಯೋಗಾರ್ಥಿಗಳಿಗೆ ಸಹಾಯಕವಾಗುವ, ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲೆ ರಚಿತವಾದಂತಹ ಸರಿಯಾದ ಗ್ರಂಥವು ಯಾವುದೊಂದೂ ಈ ವರೆಗೆ ಇರಲಿಲ್ಲ. ಈಗ ಈ 'ಉದ್ಯೋಗ ಜ್ಯೋತಿಷ್ಯ'ವು ಅಂತಹ ಉದ್ಯೋಗಾರ್ಥಿಗಳಿಗೊಂದು ಕೈದೀವಿಗೆಯಾಗಿದೆ.

ಕಾರಕೂನರು, ಟೈಪಿಸ್ಟರು, ಶೀಘ್ರಲಿಪಿಗಾರರು, ಜವಾನರು, ಇನ್ಸ್ಪೆಕ್ಟರರು, ಸ್ಟೋರಕೀಪರುಗಳು, ವೈಜ್ಞಾನಿಕ ವಿಭಾಗದ ನೌಕರರು, ಅಗ್ನಿಶಾಮಕ ದಳದ ಸಿಬ್ಬಂದಿ, ಅರ್ಥಶಾಸ್ತ್ರಜ್ಞರು, ಅಂಕಿಸಂಖ್ಯಾತಜ್ಞರು, ಇಂಜಿನಿಯರುಗಳಲ್ಲಿಯ ಪ್ರಕಾರ ಹಾಗೂ ತಾಂತ್ರಿಕ ಸಿಬ್ಬಂದಿ ಎಂದು ಮುಂತಾದ ಸರ್ವ ಖಾತೆಗಳಲ್ಲಿಯೂ ಇರುವ ಸಾಮಾನ್ಯ ಹುದ್ದೆಗಳು ಹಾಗೂ ಸಿವ್ಹಿಲ್ ಸರ್ವಿಸ್, ಮಿಲಿಟರಿ ಸರ್ವಿಸ್, ಆಕಾಶವಾಣಿ, ರೇಲ್ವೆ, ಅಂಚೆ ಮತ್ತು ತಂತಿ, ಸುಂಕ, ಕೇಂದ್ರ ಅಬಕಾರಿ, ವರಮಾನ ತೆರಿಗೆ, ವಾಯುಮಾನೋಡ್ಡಾಣ, ವಿಮಾನದಳ, ಸೈನ್ಯ, ಟಂಕಶಾಲೆ, ಆಡಿಟ ಹಾಗೂ ಅಕೌಂಟ, ಗಣಿ ಹಾಗೂ ಭೂಗರ್ಭ, ಸಚಿವಾಲಯ, ರೆವ್ಹನ್ಯೂ, ಒಕ್ಕಲತನ, ಸಾರ್ವಜನಿಕ ಶಿಕ್ಷಣ, ವೈದ್ಯಕೀ ಹಾಗೂ ಆರೋಗ್ಯ, ನ್ಯಾಯ ಪೋಲೀಸ, ಸ್ಟೇಟಅಕೌಂಟ್ಸ, ಅರಣ್ಯ, ಪಶುಸಂಗೋಪನ ಹಾಗೂ ಪಶು ಸಂಪತ್ತು, ತೋಟಗಾರಿಕೆ, ಕಮರ್ಶಿಯಲ ಟ್ಯಾಕ್ಸ, ಸಹಕಾರ ಹಾಗೂ ಮಾರ್ಕೇಟಿಂಗ, ಕೂಲಿಕಾರ, ಸಮಾಜವಿಕಾಸ ಹಾಗೂ ಕಲ್ಯಾಣ, ಮೀನ-ಗಾರಿಕೆ, ಚಾರಟೀಕಮೀಶನರ, ಪಾನನಿರೋಧ ಹಾಗೂ ಲಂಚ ನಿರ್ಮೂಲನ, ಜೇಲು, ರೀಜನಲ್‌ಟ್ರಾನ್ಸಪೋರ್ಟ, ರಾಷ್ಟ್ರೀಯ ಔದ್ಯೋಗಿಕ, ಬಂದರಗಾಹ ಆಹಾರ ಪೂರೈಕೆ ಹಾಗೂ ಉತ್ಪಾದನೆ, ಪ್ರಾಚ್ಯವಸ್ತುಸಂಶೋಧನೆ, ಬ್ಯಾಂಕ್ಸ, ಜೀವವಿಮಾ, ಸ್ಟೇಟಟ್ರಾನ್ಸಪೋರ್ಟ, ವಿಶ್ವವಿದ್ಯಾಲಯ, ಖಾದೀ ಗ್ರಾಮೋದ್ಯೋಗ, ಪತ್ರಿಕೋದ್ಯಮ ಹಾಗೂ ಗಿರಣಿಗಳು ಮೊದಲಾದ ಭಿನ್ನ-ಭಿನ್ನ ಖಾತೆಗಳಲ್ಲಿರುವ ಹುದ್ದೆಗಳನ್ನು ಪಡೆಯುವವನ ಜಾತಕ ಎಂತಿರಬೇಕು.

ಇದಲ್ಲದೇ ಈ ಗ್ರಂಥದಲ್ಲಿ ನೌಕರರಿಗೆ ಸಂಭಂಧಿಸಿದಂತೆ ನೌಕರಿ ಹತ್ತುವ ಕಾಲ, ಬದಲಿ, ಬಡತಿ, ರಜೆ, ಕಾಯಂ ಆಗುವದು, ಎಕ್ಸಟೆನ್ಶನ್, ಮೇಲಿನ ಅಧಿಕಾರಿಗಳ ಕೃಪಾವಕೃಪೆ ಇವುಗಳನ್ನು ಕುರಿತು ಸಹ ವಿವೇ-ಚಿಸಲಾಗಿದೆ. ಮತ್ತು ಒಕ್ಕಲತನ, ವ್ಯಾಪಾರ, ವಕೀಲಿ, ವೈದ್ಯಕಿಯ, ಖಾಸಗಿ ಕಾರಖಾನೆ, ಗಿರಣಿ ಮೊದಲಾದ ಸ್ವತಂತ್ರ ಉದ್ಯೋಗಗಳನ್ನೂ ಮತ್ತು ಆ ಉದ್ಯಮಿಗಳನ್ನೂ ಕುರಿತು ವಿವೇಚಿಸಲಾಗಿದೆ.

ಅಷ್ಟೇ ಅಲ್ಲದೇ ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿಯ ಗ್ರಾಮಪಂಚಾಯಿತಿ, ನಗರಸಭೆಗಳು, ವಿಶ್ವವಿದ್ಯಾಲಯಗಳು, ಅಭಿವೃದ್ಧಿ ಮಂಡಲಿಗಳು, ಶಾಲಾಬೋರ್ಡಗಳು, ವಿಧಾನಸಭೆ, ವಿಧಾನಪರಿಷತ್ತು,

ಲೋಕಸಭೆ, ರಾಜ್ಯಸಭೆ, ವಿವಿಧ ರಾಜಕೀಯ ಪಕ್ಷಗಳು ಮೊದಲಾದ ಸಂಘ, ಸಂಸ್ಥೆಗಳ, ಆಡಳಿತ ವರ್ಗಗಳ, ಸದಸ್ಯರು, ಕಾರ್ಯದರ್ಶಿಗಳು, ಅಧ್ಯಕ್ಷರು, ಸಂಚಾಲಕರು ಇವರುಗಳಲ್ಲಿರಬೇಕಾದ ಜಾತಕ ಬಲಾಬಲ ಗಳನ್ನೂ ಸಹ ಕುರಿತು ವಿವೇಚಿಸಲಾಗಿದೆ. ಯಾವುದೇ ಉದ್ಯಮದ ಮಾಲಕರು ನೌಕರರು ಅವರುಗಳ ಪರಸ್ಪರ ಸಂಬಂಧ ಸಹ ವಿವೇಚಿಸಿದೆ.

## ೭. ಗ್ರಹಗತಿ

**ಬೆಲೆ: ರೂ. ೧-೫೦**

ಈ ಗ್ರಂಥದಲ್ಲಿ ಗ್ರಹಗಳ ಗೋಚರೀ ಫಲಗಳಾವವು? ಗ್ರಹಗತಿಯನ್ನು ಹೇಗೆ ನೋಡಬೇಕು? ವೃತ್ತಪತ್ರಿಕೆಗಳಲ್ಲಿಯ ನಿಯತಕಾಲಿಕ ರಾಶಿಭವಿಷ ವನ್ನು ಹೇಗೆ ಬರೆಯುವರು? ಹೇಗೆ ಬರೆಯಬೇಕು? ವೃತ್ತಪತ್ರಿಕೆಯಲ್ಲಿಯ್ಯ ವಿಭಿನ್ನತೆಗೆ ಕಾರಣಗಳೇನು? ಆಯಾ ರಾಶಿಯವರಿಗೆ ಶುಭಾಶುಭ ಅವಧಿಗಳು ಪ್ರತಿವರ್ಷ ಯಾವವು? ಈ ಮೊದಲಾಗಿ ಗ್ರಹಗಳ ಗೋಚರೀ ಫಲಗಳ ವಿಷಯವಾಗಿ ವಿವೇಚಿಸಿದ ಪುಸ್ತಕ.

## ೮. ಅಧಿಕಾರೀ ಜ್ಯೋತಿಷಿ

**ಬೆಲೆ : ರೂ. ೧.೦೦**

ಈ ಗ್ರಂಥದಲ್ಲಿ ಪೃಚ್ಛಕರಲ್ಲಿಯ ಪ್ರಕಾರಗಳು ಹಾಗೂ ಅವರ ಸ್ವಭಾವ ನಡೆನುಡಿಗಳು ಹೇಗಿರುವವು? ಫಲಜ್ಯೋತಿಷಿಶಾಸ್ತ್ರದ ಮೇಲಿರುವ ಆಕ್ಷೇಪಣೆ ಗಳಿಗೆ ಉತ್ತರ........ಆಧುನಿಕ ಸಮಾಜದಲ್ಲಿ ಬರುವ ಕ್ಲಿಷ್ಟ ಹಾಗೂ ಸೂಕ್ಷ್ಮ ಪ್ರಶ್ನೆಗಳನ್ನು ಜ್ಯೋತಿಷಿಗಳು ಪ್ರತಿನಿತ್ಯವೂ ಹೇಗೆ ಎದುರಿಸಬೇಕಾಗುತ್ತದೆ ಎಂಬುದರ ನೋಟ.......

ಜ್ಯೋತಿಷಿಯು ತನ್ನ ವೃತ್ತಿಯಲ್ಲಿ ಯಶಸ್ವಿ ಆಗಲು ಯಾವ ಆದರ್ಶ ಗಳನ್ನು ಪಾಲಿಸಬೇಕು? ಎಂತಹ ವ್ಯಕ್ತಿತ್ವವನ್ನು ಹೊಂದಿರಬೇಕು? ಇರ ಬೇಕಾದ ಗುಣಗಳು, ಪಾಲಿಸಬೇಕಾದ ನಿಯಮಗಳು ಯಾವವು? ಈ ಮೊದ ಲಾದ ವಿಷಯವನ್ನು ಕುರಿತು ಸುದೀರ್ಘವಾಗಿ ವಿವರಿಸಲಾಗಿದೆ.

## ೯. ಅಜ್ಞಾತ ಜಾತಕ ದರ್ಶನ

**ಬೆಲೆ : ರೂ. ೧-೫೦**

ಈ ಗ್ರಂಥದಲ್ಲಿ ಜನ್ಮವೇಳೆ-ಜನ್ಮತಿಥಿ ಸರಿಯಾಗಿ ಗೊತ್ತಿಲ್ಲದ ವ್ಯಕ್ತಿಯ ಜಾತಕವನ್ನು ಅವನ ಕರ್ಣಾವಲೋಕನ, ನೇತ್ರಾವಲೋಕನ, ಗದ್ದ-ಗಲ್ಲಗಳ

ಪರೀಕ್ಷೆ ಮೊದಲಾದ ಮುಖಲಕ್ಷಣಗಳ ಮೇಲಿಂದಲೂ ನಡೆ-ನುಡಿ, ನಿದ್ರಾ ಭಂಗೀ, ಅಭಿರುಚಿ, ವಾಕ್‌ಚಾತುರ್ಯ ಮುಂತಾದ ಸಂಗತಿಗಳಿಂದ ಸಿದ್ಧ ಪಡಿಸಬಹುದು. ಅದರಂತೆ ವ್ಯಕ್ತಿಯ ಜೀವನದಲ್ಲಿಯ ನಡೆದುಹೋದ ಘಟನೆಗಳ ಮೇಲಿಂದ ಜಾತಕವನ್ನು ಒರೆಗೆ ಹಚ್ಚಿ ನೋಡಬಹುದು. ಈ ಮೊದಲಾದ ಸಂಗತಿಗಳಿಂದ ಯೋಗ್ಯ ಜನ್ಮಪತ್ರಿಕೆ ಇಲ್ಲದವನ ಭವಿಷ್ಯ ಹೇಗೆ ಹೇಳಬೇಕೆಂಬುದನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ.

## ೧೦. ಆರೋಗ್ಯ ಜ್ಯೋತಿಷ್ಯ

**ಬೆಲೆ : ರೂ. ೩-೦೦**

ಈ ಗ್ರಂಥದಲ್ಲಿ ಜಾತಕ ನೋಡಿ, ಜಾತಕನಿಗೆ ಯಾವ ಯಾವ ರೋಗಗಳು ಯಾವಾಗ ಬರುವವು? ಹಾಗೂ ಬಂದ ರೋಗಗಳು ಗುಣಮುಖವಾಗುವುದು ಯಾವಾಗ? ರೋಗನಿಧಾನದ ವಿಧಿ-ವಿಧಾನಗಳೇನು? ಔಷಧ ಸೇವಿಸುವ ಕಾಲ, ಶಸ್ತ್ರಚಿಕಿತ್ಸೆಗಳಿಗಾಗಿ ಉತ್ತಮ ಮುಹೂರ್ತಗಳು. ಇವೇ ಮುಂತಾಗಿ ರೋಗಿ-ರೋಗ, ಆಯುಷ್ಯ, ದುರ್ಮರಣಾದಿಗಳನ್ನು ಕುರಿತು ಸುಧೀರ್ಘವಾಗಿ, ಸವಿವರವಾಗಿ, ಬರೆಯಲ್ಪಟ್ಟ, ಕನ್ನಡದಲ್ಲಿಯೇ ಪ್ರಪ್ರಥಮವಾಗಿ ಸವಿಸ್ತಾರ ಜ್ಯೋತಿಷ್ಯಶಾಸ್ತ್ರ ವಿವೇಚನೆ ನಡೆಸಿದುದು ಈ ಗ್ರಂಥದ ವೈಶಿಷ್ಟ್ಯ.

## ೧೧. ಶಿಕ್ಷಣ ಜ್ಯೋತಿಷ್ಯ

**ಬೆಲೆ : ರೂ. ೪-೦೦**

ಈ ಗ್ರಂಥದಲ್ಲಿ ಶಿಕ್ಷಣದಲ್ಲಿಯ ಅಡೆ-ತಡೆಗಳ ಸುದೀರ್ಘ ವಿಶ್ಲೇಷಣೆ, ಜಾತಕಗಳ ಮೇಲಿಂದ ಶಿಕ್ಷಣವಿಚಾರ,ಭಾರತದಲ್ಲಿರುವ ಸುಮಾರು ಎಂಬತ್ತು ವಿವಿಧ ಶಿಕ್ಷಣ ಕೋರ್ಸುಗಳ ಸವಿವರ ವಿವರಣೆ, ಪದವಿ, ಸ್ನಾತಕೊತ್ತರ ಪದವಿ, ಡಿಪ್ಲೊಮಾ, ಸರ್ಟಿಫಿಕೇಟ್ ಮುಂತಾದವುಗಳನ್ನು ಎಂಥ ಜಾತಕನು ಅಳವಡಿಸಿಕೊಳ್ಳಬಹುದು. ಥೀಯರಿ,ಪ್ರಾತ್ಯಕ್ಷಿಕೆ, ಮೌಖಿಕ, ಬೋರ್ಡ ಹಾಗು ವಿಶ್ವವಿದ್ಯಾಲಯ, ಸ್ಪರ್ಧಾತ್ಮಕ ಮುಂತಾದ ವಿವಿಧ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ಜಾತಕ ಹೇಗಿರಬೇಕು? ವಿದೇಶಪರ್ಯಟನಯೋಗ ಯಾವೊಂದು ವಿದ್ಯಾರ್ಥಿ ಜಾತಕನಿಗೆ ಉಂಟೋ ?— ಇತ್ಯಾದಿಯಾಗಿ ವಿದ್ಯಾರ್ಥಿಗಳ ಆಗು-ಹೋಗುಗಳ ಮೇಲೆ ಬೆಳಕನ್ನು ಬೀರುವ ಪ್ರಪ್ರಥಮ ಸಂಶೋಧನಾತ್ಮಕ ಜ್ಯೋತಿಷ್ಯ ಗ್ರಂಥವಿರುತ್ತದೆ.





# ತೀವ್ರ ಪ್ರಕಟವಾಗಲಿರುವ ನಕ್ಷತ್ರಗಳು



- ★ ಗ್ರಹಯೋಗ
- ★ ಪ್ರಸೂತಿ ಜ್ಯೋತಿಷ್ಯ
- ★ ಶಕುನ ಜ್ಯೋತಿಷ್ಯ
- ★ ಕುಂಡಲೀ ಸಂಗ್ರಹ
- ★ ದಶಾದರ್ಪಣ
- ★ ಗ್ರಹದರ್ಶನ
- ★ ಕುಂಡಲೀ ಗುಣನಿರ್ಣಯ